ಪ್ರಕಾಶಕರು :
ಮನೋಹರ ಘಾಣೇಕರ
ಸಮಾಜ ಪುಸ್ತಕಾಲಯ, ಧಾರವಾಡ



ಪ್ರಥಮ ಮುದ್ರಣ : ಜುಲೈ ೧೯೪೯
ದ್ವಿತೀಯ ಮುದ್ರಣ : ಜುಲೈ ೧೯೬೩
ತೃತೀಯ ಮುದ್ರಣ : ಮಾರ್ಚ್ ೧೯೭೨
ಚತುರ್ಥ ಮುದ್ರಣ : ಜುಲೈ ೧೯೭೬
ಪಂಚಮ ಮುದ್ರಣ : ಮೇ ೧೯೮೩

ಬೆಲೆ : ರೂ. ೫–೦೦

ಮುದ್ರಕರು :
ರವೀಂದ್ರ ಘಾಣೇಕರ
ಪ್ರತಿಭಾ ಮುದ್ರಣ, ಧಾರವಾಡ

# ಮುನ್ನುಡಿ

ಶ್ರೀ ಆನಂದಕಂದರ ಕಥೆಗಳಿಗಾಗಲಿ, ಅವರ ಕಥೆಗಾರಿಕೆಯನ್ನು ಕುರಿ-ತಾಗಲಿ—ಮುನ್ನುಡಿ ಬೇಕಾಗಿಲ್ಲ. ಈ ನನ್ನ ಮಿತ್ರರ ಒಂದು ಕಥಾಸಂಗ್ರಹಕ್ಕೆ ಮುನ್ನುಡಿಯನ್ನು ಬರೆದದ್ದೂ ಆಗಿದೆ. ಆದರೆ ಅದು ಹಳೆಯ ಮಾತು. ಈ ಹತ್ತು-ಹದಿನೈದು ವರ್ಷಗಳಲ್ಲಿ ಶ್ರೀಮಾನ್ ಬೆಟಗೇರಿ ಕೃಷ್ಣಶರ್ಮರ ಸಾಹಿತ್ಯಮೂರ್ತಿಯು ಬೃಹದಾಕಾರವನ್ನು ತಳೆದಿದೆ. ಅವರು ಕಾದಂಬರಿ-ಕಾರರು, ವಿಮರ್ಶಕರು, ಸಂಸ್ಕೃತಿರಸಿಕರು; ಇದಲ್ಲದೆ ಅವರ ಪತ್ರಿಕಾ ಸಂಪಾದಕತ್ವವು ಕುಶಲನಾದ ತೋಟಗಾರನಂತೆ, ಬೆಳೆವ ಸಾಹಿತ್ಕಿಕರಿಗೆ ನಂದನದ ಏರ್ಪಾಟನ್ನು ಮಾಡಿಕೊಟ್ಟಿದೆ. ಹೀಗೆ ಮಾಡುತ್ತಿರುವಾಗಲೇ ಅವರ ಕತೆಗಾರಿಕೆಯ ದೃಷ್ಟಿ ಕಲ್ಲುಗಳತ್ತ ಹೊರಳಿದೆ. ಕಲ್ಲಿನಿಂದ ಕತೆಗಳನ್ನು ಒಡನುಡಿಸಿದ್ದಾರೆ ಈ ಸಂಗ್ರಹದಲ್ಲಿ ಆನಂದಕಂದರು.

ಆ ಮಾತಿಗೆ ಈಗ ಮೂವತ್ತು ವರ್ಷಗಳಾಗಿ ಹೋದವು; ಶ್ರೀ ಆಲೂರ-ರವರ 'ಗತವೈಭವ' ಪ್ರಕಟವಾಗುವುದಿದೆ ಎಂದು ಕೇಳಿ, ನನ್ನ ತರುಣ ಮನವು ಹರ್ಷದಿಂದ "ಬಂತು ಕಲ್ಲಿಗೆ ಬಾಯಿ" ಎಂದು ಹಾಡಿಕೊಂಡಿತ್ತು. ವಿಜಯನಗರದ ಷಟ್‌ಶತಸಾಂವತ್ಸರಿಕದ ನೆರವಿನಿಂದ 'ದೊಡ್ಡವರದೆಲ್ಲವೂ ದೊಡ್ಡದೆಂಬ ಮಾತು ಸುಳ್ಳಲ್ಲ' ಎಂಬ ಒಡನುಡಿ ಬಂದಾಗ, ಶಿಲಾಧ್ಯಾನ ಮಾಡಿದವರ ಮನವೇ ಕಲ್ಲಾಯಿತೋ? ಕನ್ನಡಿಗರ ಘನನಿದ್ರೆಯ ಅರ್ಥ-ವೇನು?— ಎಂದು ಪ್ರಶ್ನೆ ಉಂಟಾಗಿತ್ತು. ಈ ಅನೇಕ ವರ್ಷಗಳಲ್ಲಿ ವಿವಿಧ ಸಂಶೋಧಕರು, ಕೃತಿಕಾರರು ಕನ್ನಡ ಕಲ್ಲಿನಿಂದಲೇ ಸಾರೆತ್ತುವಂತೆ ಕೃತಿರಚನೆ ಮಾಡಿದ್ದಾರೆ. ಶ್ರೀ ಆಲೂರ, ಪಾಂಡುರಂಗರಾವ ದೇಸಾಯಿ, ತಾತಾಚಾರ್ಯ ಶರ್ಮ, ಮಲ್ಲಾರಿ, ಕೃಷ್ಣಕುಮಾರ ಇವರೇ ಮೊದಲಾದವರು ಕಲ್ಲಿನ ಕತೆ ಹೇಳಿದ್ದಾರೆ. ಶ್ರೀಮಾನ್ ಮಾಸ್ತಿಯವರು ಇತ್ತೀಚೆ ತಮ್ಮ ಕೆಲವು ಕತೆ-ಗಳಲ್ಲಿಯೂ, ನೀಳ್ಗವನಗಳಲ್ಲಿಯೂ ಈ ಸಾಮಗ್ರಿಯನ್ನು ರಸೋತ್ಕರ್ಷವಾಗು ವಂತೆ ರಚಿಸಿದ್ದಾರೆ. ಈ ಬೆಳೆಯುವ ಸಾಹಿತ್ಯಕ್ಕೆ ಆನಂದಕಂದರು ತಮ್ಮ-ದೊಂದು ಕಾಣಿಕೆಯನ್ನು ತಂದಿದ್ದಾರೆ. ಈ ಸಂಗ್ರಹದಲ್ಲಿ ಕೆಲವು ಆ ವರ್ಗಕ್ಕೆ

ಸೇರದಿದ್ದರೂ, ಎರಡೂ ಬಗೆಯ ಕತೆಗಳಲ್ಲಿ ಕನ್ನಡ ನಾಡಿನ ಹಳ್ಳಿಯ ಜೀವನದ ನವರಸೋತ್ಕಟವಾದ ವಿವಿಧ ವರ್ಣದ ಚಿತ್ರವೊಂದು ಚೆಲ್ಲವರಿದಿದೆ.

ಸಂಗ್ರಹದ ಎಂಟು ಕತೆಗಳಲ್ಲಿ ಆರು, ಒಂದು ಬಗೆಯ ಐತಿಹಾಸಿಕ ಹೊಳಪಿನಿಂದ ಕೂಡಿವೆ. ಉಳಿದೆರಡು ಅದೇ ಬಗೆಯ ಹಳ್ಳಿಯ ಜೀವನದ ಇಂದಿನ ಕೋಡುಗಳು. ಅಂತೂ ಬೆಳಗಾಂವಿ ನಾಡಿನ ಹೋದ ಮುನ್ನೂರು ನಾನೂರು ವರುಷಗಳ ರಾಜಕೀಯ-ಸಾಮಾಜಿಕ ಜೀವನದರ್ಶನವೊಂದನ್ನು ಶ್ರೀ ಆನಂದಕಂದರು ತಮ್ಮ ಸಹೃದಯ ದೃಷ್ಟಿಯಿಂದ ಮಾಡಿಕೊಟ್ಟಿದ್ದಾರೆ. ಇಂದಿನ ಕತೆಗಳಂತೆ ಹಿಂದಿನ ಕತೆಗಳೂ ವಾಸ್ತವಿಕವಲ್ಲ. ಕಥೆಗಾರರು ಕವಿ-ದೃಷ್ಟಿಯಿಂದ ಅವುಗಳನ್ನು ರೂಪುಗೊಳಿಸಿದ್ದಾರೆ. ಕಥೆಗಾರರ ರಸಿಕತೆ-ಯೊಂದಿಗೆ ಆ ನಾಡಿನ ರಸಿಕತೆಯೂ, ಅವರ ಮರುಕದೊಡನೆ ಜನತೆಯ ಕಾರುಣ್ಯಾಸ್ಪದತೆಯೂ, ಅವರ ಉತ್ಸಾಹದೊಡನೆ ಅಲ್ಲಿಯ ಜೀವನದ ಕೆಚ್ಚಿನ ಸ್ವಭಾವವೂ ಕಥೆಗಾರರ, ವಿಲಾಸವಿಲಾಸವಾಗಿ ಬರುವ ಶೈಲಿಯೊಡನೆ ಓದುಗರ ಹೃದಯವನ್ನು ಹೊಗುವುದು.

ಒಂದೊಂದು ಕತೆಗೆ ಒಂದೊಂದು ರೀತಿಯನ್ನು ಅವಲಂಬಿಸಿದ್ದಾರೆ ಆನಂದಕಂದರು. ಕಥೆಯೊಡನೆ ಸಾಮಾಜಿಕ ಬೋಧವೂ ವಾಚ್ಯವಾಗಿಯೂ, ಸೂಚ್ಯವಾಗಿಯೂ ಸೂಸುವುದು, ಹೊಮ್ಮುವುದು. ಹೊಲೆಯರ ಹನುಮಪ್ಪನ ಸಲುವಾಗಿ ಗುಡ್ಡದವ್ವ ಕಲ್ಲಿನಿಂದ ಸಾಕ್ಷಿ ಕೊಟ್ಟಿದ್ದಾಗಲಿ, ಸೀಮೆಯ ಕಲ್ಲಿನ ನೆವದಿಂದ ಹಳೆಯ ಕಡತದಿಂದ ಹೊರಬಿದ್ದ ಕಥೆಯೇ ಆಗಲಿ, ಅಥವಾ ಜೋಗತಿಯ ಕಲ್ಲು ಪ್ರಕಟಿಸುವ ಕಥೆಯಾಗಲಿ— ಕಲ್ಲಿನ ಕಥೆಗಳೇ; ಆದರೂ ಒಂದರಂತೊಂದಿಲ್ಲ. ಹೊಲೆಯರಲ್ಲಿಯೂ ಇರುವ ಸತ್ಯಪ್ರೀತಿ, ಸ್ತ್ರೀಗೌರವದ ವಿಷಯದಲ್ಲಿ ನಮ್ಮ ನಾಡಿಗರಲ್ಲಿರುವ ನಿಷ್ಠುರ ನೀತಿ, ಸ್ತ್ರೀಯು ಯಾವ ಜಾತಿ ಕುಲದವಳೇ ಆಗಲಿ, ಆಕೆಗೆ, ಚೊಕ್ಕ ಸ್ತ್ರೀತ್ವವನ್ನು ಕುರಿತು ಇರುವ ಆದರದ ರೀತಿ, ರಮ್ಯವಾಗಿ ಮೂಡಿದೆ ಈ ಕತೆಗಳಲ್ಲಿ. ಕಂಕಣದ ಕೈ ಮತ್ತು ವೀರ-ವಸಾನ್ಯ ನಮ್ಮ ನಾಡಿನ ಅದ್ಭುತರಮ್ಯ ವೀರಜೀವನದ ಸಾಕ್ಷಿಗಳಾಗಿವೆ. ಬಡವಿಯ ಬಾವಿಯು ಜಾತಿ-ನೀತಿಗಳನ್ನು ಮೀರಿದ ಮಾನವತೆಯ ಧರ್ಮ-ಬುದ್ಧಿಯ ಕಥೆಯಾಗಿದೆ. ಉಳಿದೆರಡು ಕಥೆಗಳಲ್ಲಿ ಒಂದು ಹಳ್ಳಿಯ-ಇನ್ನೊಂದು ಪಟ್ಟಣದ-ಹಸಗೆಟ್ಟ ಜೀವನದ ಚಿತ್ರಗಳಾಗಿವೆ. ಯಾವ ಕಥೆ-

ಯಲ್ಲಿಯೂ ಎರಡು ಪಕ್ಷಗಳು ಎದ್ದು ಕಾಣುತ್ತಿವೆ. ಒಂದು ಸತ್ಯ, ನ್ಯಾಯ, ಪ್ರೀತಿ, ದಯೆ, ದಾಕ್ಷಿಣ್ಯ ಮೊದಲಾದ ಸದ್ಗುಣಗಳಿಗೆ ಜೀವ ತೆರಲು ನಿಂತರೆ, ಇನ್ನೊಂದು ರೂಢಿ, ಪ್ರಬಲವಾಸನೆ, ತಾಮಸ, ಅಹಂಕಾರ ಮೊದಲಾದುವುಗಳಿಗೆ ಬಲಿಯಾಗಿ, ಸದ್ಗುಣಿಗಳೊಡನೆ ಹೋರಾಡಲು ನಿಲ್ಲುವುದು. ಸೋಲು ಗೆಲವು ಯಾರದೇ ಇರಲಿ; ಮಾನವನ ಹೃದಯ ಸೋಲುವುದು ಯಾವುದಕ್ಕೋ ಅದೇ ಸತ್ಯ. ಅದೇ ಕಡೆಬಾಳುವುದು. ಇಲ್ಲಿಯ ಕಥೆಗಳಿಗೆ ನೀತಿಯ ಸೆರಗೊಂದಿದ್ದರೂ ಅದು ತನ್ನ ಮರ್ಯಾದೆಯನ್ನು ಮೀರಿಲ್ಲ. ನೀತಿ-ರೀತಿ-ಗಳಿಗಿಂತ ಪ್ರಕೃತಿಯ ಹಿಂದೆ ಮಿಂಚುವ ಪೌರುಷ ದೊಡ್ಡದು. ಅದು ಎಲ್ಲ ಬೆಲೆಗಳ ನೆಲೆ. ಆ ನೆಲೆಯ ನಿಲುವನ್ನು ವಿವಿಧವಾಗಿ ತೋರಿಸಿಕೊಟ್ಟಿದ್ದಾರೆ ಕತೆಗಾರರು. ಈ ಕತೆಯನ್ನೋದಿ ಇಂಥ ನೂರಾರು ಕಥೆಗಳು ಹೊರಹೊಮ್ಮಿ ಬಂದು, ನಾಡಿನ ತೇಜಃಪುಂಜವು ನವೀನ ಮೂರ್ತತೆಗಾಗಿ ಒಡಮೂಡಿ ಬರಲಿ ಎಂದು ನಾನು ಅಪೇಕ್ಷಿಸಿದರೆ ತಪ್ಪಾಗಲಾರದು.

ಶ್ರೀ ಆನಂದಕಂದರ ಈ ಕಥೆಗಳ ಕಾಣಿಕೆಯು ಓದುಗರಲ್ಲಿ ಒಂದು ಕಾಣ್ಕೆಯನ್ನೇ ಮೂಡಿಸೀತು— ಎಂದು ನಾನು ನಂಬುತ್ತೇನೆ.

ಸೊಲ್ಲಾಪುರ
ತಾ. ೧೬-೭-೧೯೪೯

— ದ. ರಾ. ಬೇಂದ್ರೆ

## ಮೊದಲಿಗೆ ಮೊದಲು

ಈ ಕಥಾಸಂಕಲನದ ಐದನೆಯ ಆವೃತ್ತಿಯಿದು. ಕಲಬುರ್ಗಿ ವಿಶ್ವವಿದ್ಯಾಲಯದವರು, ಬಿ. ಎ. II ( Basic ) ಪರೀಕ್ಷೆಯ ವಿದ್ಯಾರ್ಥಿಗಳಿಗೆ ಪಠ್ಯಪುಸ್ತಕವನ್ನಾಗಿ ನಿಯಮಿಸದೆ ಹೋಗಿದ್ದರೆ, ಈ ಐದನೆಯ ಆವೃತ್ತಿ ಇಷ್ಟು ಬೇಗನೇ ಬೆಳಕಿಗೆ ಬರುತ್ತಿದ್ದಿತೋ ಇಲ್ಲವೊ ! ಆದುದರಿಂದ ಕಲಬುರ್ಗಿ ವಿಶ್ವವಿದ್ಯಾಲಯದ ಕನ್ನಡ ಅಭ್ಯಾಸಸಮಿತಿಯ ಸದಸ್ಯರಿಗೆಲ್ಲ ನನ್ನ ಅಭಿವಂದನೆಗಳು ಮೊದಲು ಸಲ್ಲಬೇಕು.

ಈ ಕಥಾಸಂಕಲನದ ಈ ಮೊದಲಿನ ನಾಲ್ಕು ಆವೃತ್ತಿಗಳನ್ನು ಪ್ರಕಟಿಸಿದವರು ಶ್ರೀ ಭಾಲಚಂದ್ರ ಘಾಣೇಕರ ಅವರು. ಈ ಆವೃತ್ತಿಯ ಪ್ರಕಾಶಕರೂ ಅವರೇ ! ಮೊದಲಿನಿಂದಲೂ ನನ್ನೊಡನೆ ಆತ್ಮೀಯತೆಯಿಂದ ನಡೆದುಕೊಳ್ಳುತ್ತ ಬಂದಿರುವ ಶ್ರೀ ಭಾಲಚಂದ್ರ ಘಾಣೇಕರರೂ, ಅವರ ಇಬ್ಬರು ಚಿರಂಜೀವಿಗಳೂ ನನ್ನಿಂದ ಅಭಿನಂದನೆಗಳನ್ನು ಅಪೇಕ್ಷಿಸರೆಂಬುದನ್ನು ನಾನು ಬಲ್ಲೆ; ಹಾಗೆಂದು ನಾನವರಿಗೆ ನನ್ನ ಕೃತಜ್ಞತೆಗಳನ್ನು ಸಲ್ಲಿಸದೆ ಹೋದರೆ, ಅದು ನನ್ನ ಕರ್ತವ್ಯಚ್ಯುತಿಯೆಂದೂ ನಾನು ಬಲ್ಲೆ.

ನಾನು ಕನ್ನಡ ಜಾನಪದ ಜೀವನಸಂಸ್ಕೃತಿಯ ಅಭ್ಯಾಸಿ. ಅದರ ಅರಿಕೆಯಾಗುತ್ತ ಹೋದಂತೆಲ್ಲ, ನಮ್ಮ ನಾಡಿಗರು ಮಾನವಜೀವನದ ರಹಸ್ಯವನ್ನು ಎಷ್ಟೊಂದು ಸೂಕ್ಷ್ಮ ರೀತಿಯಿಂದ ಅರಿತುಕೊಂಡಿರುವರೆಂಬುದನ್ನು ಮನಗಂಡು ಅಚ್ಚರಿಪಟ್ಟೆ, ಹೆಮ್ಮೆಯನ್ನು ತಾಳಿದೆ, ಹಿಗ್ಗಿ ನಲಿದಾಡಿದೆ ಅವರ ವ್ಯಕ್ತಿತ್ವದ ನಿಷ್ಠೆ, ಸಾಮಾಜಿಕ ಪ್ರಜ್ಞೆ— ಇವುಗಳ ಸಾಕ್ಷಾತ್ಕಾರ ಮತ್ತೆ ಮತ್ತೆ ನನ್ನ ಅಂತರಂಗವನ್ನು ಜುಮ್ಮುರಿಟ್ಟಿಸುತ್ತಿತ್ತು. ಕನ್ನಡ ಜಾನಪದ ಜೀವನಪರಂಪರೆಯಲ್ಲಿ ನಾನು ಕಂಡಿರುವ ಸಾಂಸ್ಕೃತಿಕ ಕಥಾವಸ್ತುಗಳು ಅನೇಕ. ಹೇಗಾದರೂ ಮಾಡಿ ಆ ವಸ್ತುಗಳನ್ನು ಇಂದಿನ ಕನ್ನಡಿಗರ ಮನದ ಮುಂದೆ ಇರಿಸಬೇಕೆಂಬ ಹಾರಯಿಕೆ ನನ್ನ ಭಾವನೆಗಳನ್ನು ಕುಣಿಸುತ್ತಲಿದ್ದಿತು. ಇಂದಿಗೆ ೨೪-೨೫ ವರ್ಷಗಳ ಹಿಂದೆ, ಮುಂಬಯಿ ಆಕಾಶವಾಣಿಯು ನನ್ನ ಆ ಹಾರಯಿಕೆ ಪ್ರತ್ಯಕ್ಷ ಕಾರ್ಯಮಾಡುವಂತೆ ಅವಕಾಶವನ್ನು ಕಲ್ಪಿಸಿಕೊಟ್ಟು, ಈ

ಕಥೆಗಳು ಒಂದೊಂದಾಗಿ ಬೆಳಕಿಗೆ ಬರುವಂತೆ ಉಪಕಾರ ಮಾಡಿತು. ಮುಂಬಯಿ ಆಕಾಶವಾಣಿಯ ಕನ್ನಡ ವಿಭಾಗದ ಅಂದಿನ ಕಾರ್ಯಕರ್ತರ ಒತ್ತಾಯವಿಲ್ಲದೆ ಹೋಗಿದ್ದರೆ, ಈ ಕಥೆಗಳು ಇದುವರೆಗೂ ನನ್ನ ಹೃದಯದಲ್ಲಿಯೇ ಹುದುಗಿ ಬಿದ್ದಿರುತ್ತಿದ್ದುವೇನೊ ! ನಾನು ಬರೆಯುವ ಕಾರ್ಯದಲ್ಲಿ ತುಂಬ ಆಲಸಿಗ; ಯಾವುದಾದರೂ ಒತ್ತಾಯವಿದ್ದಾಗಲೇ ನನ್ನ ಲೇಖನಿ ಜಾಗೃತವಾಗುವುದು.

ಈ ಸಂಕಲನದ ಮೊದಲ ಆವೃತ್ತಿ ಪ್ರಕಟವಾದ ಮೇಲೆ, ಅನೇಕ ಜನ ಸಹೃದಯ ವಿಮರ್ಶಕರು ಇಲ್ಲಿಯ ಕಥೆಗಳನ್ನು ಮನವಾರೆ ಹೊಗಳಿದರು. ಕನ್ನಡದಲ್ಲಿಯೇ ಇವು ಹೊಸಬಗೆಯ ಕಥೆಗಳೆಂದು ಮೆಚ್ಚುಗೆಯ ಮಾತುಗಳ-ನ್ನಾಡಿದರು. ಇದರಿಂದ ನನಗೆ ತುಂಬ ತೃಪ್ತಿಯೆನಿಸಿತು. ವಿಮರ್ಶಕರ ಹೊಗಳಿಕೆ, ಮೆಚ್ಚಿಗೆಯ ಮಾತುಗಳು ಕನ್ನಡನಾಡಿನ ಐತಿಹಾಸಿಕ ಕಾಲದ ಜನಜೀವನಕ್ಕಲ್ಲದೆ, ನನ್ನ ಕಥಾಲೇಖನಕ್ಕೆ ಸಲ್ಲದೆಂಬುದನ್ನು ನಾನು ಅರಿತು-ಕೊಂಡು, ನಮ್ಮ ನಾಡಿನ ಜನತೆಯ ಸಾಂಸ್ಕೃತಿಕ ಪ್ರಜ್ಞೆಗಾಗಿ ಹೆಚ್ಚಿನ ಆದರ-ಅಭಿಮಾನಗಳನ್ನು ತಾಳಿದೆ.

ಇದರಲ್ಲಿಯ ಬೇರೆ ಬೇರೆ ಕಥೆಗಳು ಹಿಂದೀ, ಮರಾಠಿ ಮೊದಲಾದ ಪರ-ಭಾಷೆಗಳಲ್ಲಿ ಭಾಷಾಂತರಿತವಾಗಿವೆ. ಮೂರು-ನಾಲ್ಕು ಕಥೆಗಳು ರೇಡಿಯೋ ರೂಪಕಗಳಾಗಿ ಬಿತ್ತರಗೊಂಡು ಬಹುಜನರಿಂದ ಮೆಚ್ಚಿಕೆಯ ಮನ್ನಣೆ ಪಡೆದಿವೆ. ಕಲಬುರ್ಗಿ ವಿಶ್ವವಿದ್ಯಾನಿಲಯವು ಕನ್ನಡ ಸಂಸ್ಕೃತಿಯನ್ನು ಅಭ್ಯಾಸಿಸುವ ಸ್ನಾತಕೋತ್ತರ ವಿದ್ಯಾರ್ಥಿಗಳಿಗೆ ಪಠ್ಯಪುಸ್ತಕವೆಂದು ನಿಯಮಿಸಿ, ಈ ಸಂಕಲ-ನಕ್ಕೆ ಆದರವನ್ನು ಸಲ್ಲಿಸಿದೆ. 'ಇಂತಹ ಕಥೆಗಳನ್ನು ನೀವು ಇನ್ನೂ ಹೆಚ್ಚಾಗಿ ಬರೆಯಬೇಕು' ಎಂದು ಹಲವು ಜನ ಸಹೃದಯರಿಂದ ಕಾಗದಗಳು ಬಂದೇ ಬರುತ್ತಲಿವೆ. ಇವರೆಲ್ಲರಗೂ ನನ್ನ ವಿಶ್ವಾಸದ ವಂದನೆಗಳು.

ಧಾರವಾಡ

ದಿ. ೧೫-೩-೧೯೮೨ —ಆನಂದಕಂದ

# ಪರಿವಿಡಿ



# ಮಾತನಾಡುವ ಕಲ್ಲು

## ೧

ನಮ್ಮ ಕನ್ನಡನಾಡಿನಲ್ಲಿ ಮಾತನಾಡುವ ಕಲ್ಲುಗಳು ಬಹಳ. ವೀರಗಲ್ಲು, ಮಾಸ್ತಿಗಲ್ಲು, ನಿಷಿಧಿಕಲ್ಲು—ಇವೆಲ್ಲ ನಮ್ಮ ವೀರರ-ಮಾನಿನಿಯರ-ಸಾಧು-ಸಂತರ ಮಾಹಾತ್ಮ್ಯವನ್ನು ಹೇಳಿ ನಮಗೆ ಹೆಮ್ಮೆಯನ್ನು ಹುಟ್ಟಿಸುವಂಥವಾದರೆ, ಬರೆಹದ ಕಲ್ಲುಗಳು ನಮ್ಮ ಪೂರ್ವಜರ ವೀರ-ವೈಭವ-ಸಂಸ್ಕೃತಿಗಳ ಮೇಲ್ಮೆಯನ್ನು ಸಾರುತ್ತಿರುವುವು. ಇವುಗಳನ್ನು ಬಿಡಿರಿ; ನಮ್ಮ ನಾಡಿನ ಪ್ರತಿಯೊಂದು ಊರ ಅಗಸೆಯ ಮುಂದಿರುವ 'ಬೋರ್‌ಗಲ್ಲು (ಗೋರ್ಕಲ್ಲು)'ಗಳೂ ತಮ್ಮ ಅಡಿಯಲ್ಲಿ ಒಂದೊಂದು ಕತೆಯನ್ನು ಅಡಗಿಸಿಕೊಂಡು ಕುಳಿತಿರುವುವು. ರಾಮಾಯಣ-ಮಹಾಭಾರತಗಳ ಕತೆಗಳನ್ನು ಹೇಳುವ ಕಲ್ಲುಗಳಂತೂ, ನಮ್ಮಲ್ಲಿ ನೋಡಿದಲ್ಲೆಲ್ಲ ಸಿಕ್ಕುವವು.

ನಾನೀಗ ಹೇಳಬೇಕೆಂದಿರುವ ಮಾತನಾಡುವ ಕಲ್ಲಿನ ವಿಷಯ, ಈ ಜಾತಿಗಳಿಗೆ ಸೇರಿದುದಲ್ಲ. ಅದು ಹೇಳುವ ಕತೆ, ಬೋಧಿಸುವ ತತ್ತ್ವ ಇವೆಲ್ಲ ಒಂದು ವೈಶಿಷ್ಟ್ಯದಿಂದ ಕೂಡಿವೆ. ಸಂಪ್ರದಾಯಶರಣರಿಗೆಲ್ಲ ಮಾನವತೆಯ ತಿರುಳನ್ನು ತಿಳುಹುವಂತಿವೆ.

ಬೆಳಗಾಂವಿ ಜಿಲ್ಲೆಯ ಗೋಕಾಂವಿ ನಾಡು. ಅಲ್ಲಿ ನಮ್ಮ ಬಂಧುಗಳೊಬ್ಬರು ಇರುವ ಹಳ್ಳಿಯಿಂದ ಗೋಕಾಂವಿಗೆ ಹೋಗುವ ಹೆದ್ದಾರಿಯ ಪಕ್ಕದಲ್ಲಿ, ಈ ಮಾತನಾಡುವ ಕಲ್ಲು ನಿಂತುಕೊಂಡಿದೆ. ದಾರಿ ಗುಡ್ಡದ ಓರಿಗುಂಟ ದೂರದ ವರೆಗೆ ಸಾಗಿದೆ. ಹಳ್ಳಿಯನ್ನು ಬಿಟ್ಟು ಒಂದೆರಡು ಮೈಲು ನಡೆದರೆ, ನಾವು ಈ ಕಲ್ಲನ್ನು ಕಾಣುತ್ತೇವೆ. ದಾರಿಯ ಎಡಪಕ್ಕದಲ್ಲಿ ಕಡಿದಾದ ಗುಡ್ಡದ ಸಾಲು. ಗುಡ್ಡದ ಕೋಡಿನ ಮೇಲೆ, ಕೋಟೆ ಕಟ್ಟಿದಂತೆ ಕಾಣುವ ಬಂಡೆಗಳ ಬಳಗ. ಈ ಬಳಗದೊಳಗಿಂದಲೆ ಎಂದೋ ಏನೋ—ಆಧಾರ ತಪ್ಪಿ—ನೆಲಕ್ಕೆ ಉರುಳಿದ ಒಂದು ಬಂಡೆ. [illegible]

ಆನೆಗಳನ್ನು ಕಟ್ಟಿ ಎಳೆಯಿಸಿದರೂ ಕದಲಲಾರದಂತಹ ಅಚಲ ಶಿಲೆಯದು. ಆ ಪ್ರದೇಶದಲ್ಲಿಯ ಜನರೆಲ್ಲರೂ ಅದನ್ನು 'ಸಾಕ್ಷಿಯ ಪಡಿ (ಕಲ್ಲು)' ಎಂದು ಕರೆಯುವರು. ಆ ಕಲ್ಲು ತನ್ನ ಮೌನಭಾಷೆಯಲ್ಲಿಯೇ ಕತೆಯೊಂದನ್ನು ಕಟ್ಟಿ ಗಾಳಿಯಲ್ಲಿ ಹರಡುತ್ತಿರುವುದು. ಅದರ ಅಸ್ತಿತ್ವವಿರುವವರೆಗೂ ಅಲ್ಲಿ ತಿರು-ಗಾಡುವ ಜನರು, ಅದರ ಕತೆಯನ್ನು ಕೇಳಬಹುದಾಗಿದೆ:

ಸಂಕಪ್ಪ ಹಳ್ಳಿಯಲ್ಲಿ ಒಬ್ಬ ಸಾಮಾನ್ಯ ಒಕ್ಕಲಿಗ. ಮನೆಯಲ್ಲಿ ಅವನ ತಾಯಿ ಮುದುಕಿ ಲಚಮವ್ವ; ಹರೆಯದ ಹೊಸ ಮೊದಲಗಿತ್ತಿ ಹೆಂಡತಿ ಗೌರಿ. ಇವರೆಲ್ಲ ಬದುಕಿ ಬಾಳಿದ ಕಾಲ ಯಾವುದೆಂಬುದನ್ನು ನಾನು ಹೇಳಲಾರೆ. ಆದರೆ ಇವರ ಬಾಳಿಗೆ ಸಂಬಂಧಿಸಿದ ಸ್ವಾರಸ್ಯವಾದ ಕತೆ, ಆ ಭಾಗದ ಜನತೆಯ ಮನದಲ್ಲಿ ನಿರಂತರವಾಗಿದ್ದು, ವರ್ತಮಾನ ಕಾಲದಲ್ಲಿಯೂ ಇವರನ್ನು ಸಜೀವಿಗಳನ್ನಾಗಿಸಿ ಇರಿಸಿದೆ. ಇವರು ಬದುಕಿ ಇದ್ದ ವರ್ಷ, ತಿಂಗಳು, ತಿಥಿಗಳನ್ನು ಅಲ್ಲಿಯ ಜನರು ಎಂದೂ ಕೇಳುವು-ದಿಲ್ಲ; ಮಿಕ್ಕ ಜನರೂ ಅದನ್ನು ಕೇಳುವ ಕಾರಣವಿಲ್ಲವೆಂದು ನನ್ನ ಅಭಿಪ್ರಾಯ.

ಸೊಸೆಯಾದ ಗೌರಿ ತನ್ನ ತವರುಮನೆಯ ಬಳಗದವಳೇ ಆದುದರಿಂದ, ಅತ್ತೆ ಲಚಮವ್ವ ಅವಳನ್ನು ಹೊಟ್ಟೆಯ ಮಗಳಂತೆ ಪ್ರೀತಿಸುವಳು. ಬಡವರ ಮನೆಯಲ್ಲಿ ಹುಟ್ಟಿ ಬೆಳೆದವಳಾದರೂ ಗೌರವ್ವನಲ್ಲಿ ರೂಪ ಗುಣಗಳಿಗೇನೂ ಬಡತನವಿರಲಿಲ್ಲ. ನೋಡಿದ ಸಲಕ್ಕೊಮ್ಮೆ ಗಂಡನ ಮುಖದ ಮೇಲೆ ಹೆಮ್ಮೆಯ ನಗೆಯನ್ನು ಚಿಮ್ಮಿ, ಹೃದಯವನ್ನು ಹಿಗ್ಗಿಸಬಹುದಾದಂತಹ ಕಣ್ಣು, ಮೂಗು, ಮೈಬಣ್ಣ. ಮನವೊಪ್ಪುವಂತಹ ಗಂಡ ದೊರೆತುದದರಿಂದ ಹಿಂಗದ ಉತ್ಸಾಹ ಗೌರಿಗೆ. ಮನೆಯ ಕೆಲಸ ಮುಗಿಸಿಕೊಂಡು ಹೊಲಕ್ಕೆ ಹೋಗಿ, ಗಂಡನ ಕೆಲಸದಲ್ಲಿ ಆಕೆ ನೆರವಾಗುವಳು. ತನ್ನನ್ನು ಒಂದೂ ಶ್ರಮದ ಕೆಲಸಕ್ಕೆ ಹಚ್ಚದ ಸೊಸೆ, ಮುದುಕಿ ಲಚಮವ್ವನ ಪ್ರೀತಿಯನ್ನು ಸೆಳೆದುಕೊಳ್ಳದೆ ಇರುತ್ತಾಳೆಯೆ? ತಪ್ಪಿ-ತಪ್ಪಿ ಮುದುಕಿ ಎಂದಾದರೂ ಬೀಸುವ ಕಲ್ಲ ಮುಂದೆ ಕುಳಿತರೆ, ಆಗ ಜಾನಪದ ಹಾಡುಗಳಲ್ಲಿ ಸೊಸೆಯ ಸದ್ಗುಣ-ಸೌಂದರ್ಯಗಳ ಬಣ್ಣನೆಯು ತುಂಬಿರುವುದು.

ಮನೆಗೆ ಬಂದು ಮೂರು-ನಾಲ್ಕು ವರ್ಷಗಳಾದರೂ, ಗೌರಿ ತಾಯಿ-ಯಾಗುವ ಲಕ್ಷಣ ತೋರಲಿಲ್ಲ. ಲಚಮವ್ವ ಊರಲ್ಲಿಯ ಸಣ್ಣ-ಪುಟ್ಟ ದೇವತೆಗಳನ್ನೂ, ಕುಲಪರಂಪರೆಯ ದೈವತ-ಗಿರಿಯ ಮಲ್ಲಿಕಾರ್ಜುನನನ್ನೂ ಬೇಡಿಕೊಳ್ಳುವಳು; ಹಲವಾರು ಹರಕೆಗಳನ್ನು ಹೊತ್ತುಕೊಳ್ಳುವಳು. ಅತ್ತೆಯ ಆತುರ ಗೌರಿಯಲ್ಲಿಯೂ ತಾಯ್ತನದ ಆಶೆಯನ್ನು ಹೆಚ್ಚಿಸತೊಡಗಿತು. ಉತ್ಕಟವಾದ ಯಾವ ಆಶೆ ಮಾನವನಿಗೆ ಫಲವನ್ನು ಕೊಡುವುದಿಲ್ಲ?

ಬಹಳ ದಿನಗಳಿಗೆ ಗೌರಿ ಬಸಿರಿಯಾದಳು. ಮನೆಯಲ್ಲಿ ಸಂತಸದ ಸಂತೆ. ಮುದುಕಿ ಲಚಮವ್ವ, ಮೊಮ್ಮಗನಿಂದ ಕೂಡಿದ ಹಲವು ಬಗೆಯ, ಕನಸುಗಳನ್ನು ಕಾಣಲು ತೊಡಗಿದಳು. ಗೌರಿಯ ಮನದ ಉಲ್ಲಾಸ, ಅವಳ ಬಯಕೆಯ ಬೇನೆಯನ್ನು ಓಡಿಸಿ, ಒಂದು ಹೊಸ ಹುರುಪನ್ನು ಒದಗಿಸಿದ್ದಿತು. ತಾಯಿ-ಹೆಂಡತಿಯರ ಹಿಗ್ಗಿನ ಸೋಂಕು, ಕರ್ಮಯೋಗಿಯಾದ ಸಂಕಪ್ಪನ ಕರುಳನ್ನೂ ತಾಗದೆ ಬಿಡಲಿಲ್ಲ.

ಗೌರಿಗೆ ಏಳು ತಿಂಗಳು ತುಂಬಿ ಎಂಟರಲ್ಲಿ ಬಿದ್ದಿತು. ತಾಯಿಯ ಹೇಳಿಕೆಯಂತೆ ಸಂಕಪ್ಪ, ಮನೆಯ ನಿತ್ಯದ ಬಳಕೆಗೂ ಬಾಣಂತಿತನಕ್ಕೂ ಬೇಕಾಗುವ ಪದಾರ್ಥಗಳನ್ನು ತರಲಿಕ್ಕೆ ಗೋಕಾಂವಿಯ ಸಂತೆಗೆ ಹೋದ. ತುಂಬಿದ ಬಸಿರೆಯಾದರೂ ಗೌರಿ ಮನೆಗೆಲಸ ಮುಗಿಸಿಕೊಂಡು, ಊಟ ತೀರಿಸಿ, ಬುತ್ತಿ ಕಟ್ಟಿಕೊಂಡು ಗುಡ್ಡದೋರೆಯ ಹೊಲಕ್ಕೆ ಹೋದಳು.

ಕೋಡುಗಲ್ಲುಗಳಿದ್ದ ಗುಡ್ಡದ ಅಡಿಯಲ್ಲಿಯೆ, ದಾರಿಯ ಬಲಬದಿಗೆ ಹೊಲವು ಉದ್ದಕ್ಕೆ ಚಾಚಿಕೊಂಡಿದೆ. ಆಗ ಕಾರ್ತಿಕಮಾಸ. ಹೊಲದಲ್ಲಿ ಮುಂಗಾರುಜೋಳದ ಹುಲುಸಾದ ಬೆಳೆ ಮಾಗಿ ನಿಂತಿದೆ. ಬೆಳೆಯ ಸುತ್ತಲೂ ಪಟ್ಟೆ ಕಟ್ಟಿ ಬಿತ್ತಿದ ಹುಚ್ಚೆಳ್ಳಿನ ಸಾಲುಗಳು, ಹೊಂಬಣ್ಣದ ಹೂಗಳನ್ನು ಹೊತ್ತು ನಿಂತು, ಚಳಿಗಾಲದ ನೆಲಸಿರಿಗೆ ಪೂಜೆಯನ್ನು ಸಲ್ಲಿಸುತ್ತಲಿವೆ. ಮಾಗಿದ ತುಂಬುಗಾಳಿನ ತೆನೆಗಳು, ಒಕ್ಕಲಿಗರಿಗೆ ಸುಖಜೀವನದ ಅಭಯವನ್ನು ಮೊಗವೆತ್ತಿ ಸಾರುತ್ತಿವೆ.

ಗೌರವ್ವನಿಗೆ ತನ್ನ ಬಸಿರಿನಷ್ಟೇ ಈ ಬೆಳೆಯ ಹೊಲದಿಂದಲೂ ಆನಂದ ಸಿಕ್ಕುವುದು; ಆದುದರಿಂದಲೆ, ಅತ್ತೆ ಬೇಡವೆಂದು ಹೇಳಿದರೂ ಕೇಳದೆ, ನಿತ್ಯವೂ ಅವಳು ಹೊಲಕ್ಕೆ ಹೋಗುವಳು. ಇಂದಂತೂ ಸಂಕಪ್ಪ ಸಂತೆಗೆ

ಹೋಗಿದ್ದ. ಗುಡ್ಡದ ಓರೆಯ ಹೊಲವಾದುದರಿಂದ ವಿಶೇಷ ಕಾವಲಿನ ಅಗತ್ಯವಿತ್ತು. ಆದುದರಿಂದಲೆ ಗೌರಮ್ಮ ಹೊಲಕ್ಕೆ ಬಂದು ಕಾವಲು ಮಾಡತೊಡಗಿದಳು. ಭಾವುಕರಾದ ನೋಡುಗರಿಗೆ— ಆ ಹೊಲದ ಒಡ್ಡಿನ ಮೇಲೆ ನಿಂತಿದ್ದ ಗೌರಿ,— ತುಂಬುಬಸಿರಿಯಾದ ಭೂದೇವಿ ರೂಪುಗೊಂಡು ನಿಂತಂತೆ ಕಂಡಿರಬಹುದು. ಆದರೆ ಹಿಂತು ನಿಂತು ನೋಡುವಷ್ಟು ಅವಕಾಶ, ಆ ಹಳ್ಳಿಯ ದುಡಿಮೆಗಾರರಿಗೆ ಎಲ್ಲಿ ಸಿಕ್ಕಬೇಕು? ಲೋಕದ ಕಲ್ಯಾಣಶಕ್ತಿಯ ಕೈಯಲ್ಲಿಯ ಆಯುಧಗಳವರು. ಯಾವಾಗಲೂ ದುಡಿಯುತ್ತಲೇ ಇರಬೇಕು.

ಹೊಲದ ಕಾವಲಿನೊಂದಿಗೇ ಗೌರಿ, ಮನೆಯ ದನಗಳಿಗಾಗಿ ಮೇವನ್ನು ಕಿತ್ತು ಕೂಡಿಸಿದಳು. ಗಂಡ ಸಂತೆಯಿಂದ ಬರುವ ದಾರಿ ಅದೇ ಆದುದರಿಂದ, ಆತನ ಬರವನ್ನು ಕಾಯತೊಡಗಿದಳು. ನೆರೆಹೊರೆಯ ಹೊಲದವರೆಲ್ಲ ನಿತ್ಯದ ಕೆಲಸ ಮುಗಿಸಿಕೊಂಡು ಮನೆಯ ಕಡೆಗೆ ಮರಳಿದರು. ದಾರಿ ಹಿಡಿದು ಬಂದ ಸಂತೆಯ ಜನ ಯಾರು ಯಾರೋ—ಹೊಲವನ್ನು ದಾಟಿ ದಾಟಿ ಮುಂದೆ ಸಾಗುತ್ತಿದ್ದರು. ಸಂಕಪ್ಪ ಬರಲೇ ಇಲ್ಲ. ಬಂದೇ ಬರುವನೆಂದು ನಂಬುಗೆ ಗೌರಿಗೆ.

ಸೂರ್ಯ ಗುಡ್ಡದ ತುದಿಯಲ್ಲಿ ಮರೆಯಾದ. ಸಂಜೆಯ ಕೆಂಬಣ್ಣ ಪಡುವಣದ ಆಗಸದಲ್ಲಿ ಹಬ್ಬಿ ಹರಡಿದ್ದಿತು. ಬೇಗನೆ ಕತ್ತಲೆ ಮುಸುಕುವುದೆಂಬ ಯೋಚನೆ ಗೌರಿಯ ಎದೆಯನ್ನು ತಟ್ಟಿತು. ಹೋಗಬೇಕಾದ ದಾರಿಯೂ ದೂರವಿದಿತು. ಆದುದರಿಂದ ತಾನಿನ್ನು ದಾರಿ ಕಾಯುತ್ತ ನಿಲ್ಲುವುದು ಸರಿಯಲ್ಲವೆಂದು ಗೌರವ್ವನಿಗೆ ಎನಿಸಿತು. ಮಾಡಿದ್ದ ಮೇವನ್ನು ಕೂಡಿಸಿ ಹೊರೆ ಕಟ್ಟಿದಳು. ಮನೆಯಲ್ಲಿ ನಾಲ್ಕೈದು ದನಗಳು. ಹೊರೆ ದೊಡ್ಡದಾಗಿಯೆ ಇತ್ತು. ತಾನೇ ತಲೆಯ ಮೇಲೆ ಹೊತ್ತುಕೊಳ್ಳಬೇಕೆಂದು ಹವಣಿಸಿದಳು. ಎತ್ತಲಿಕ್ಕೆ ಸಾಧ್ಯವಾಗಲಿಲ್ಲ. ಏನು ಮಾಡಬೇಕೆಂಬುದು ತಿಳಿಯದೆ, ನಡುವೆ ನಿಂತು ನೋಡಿದಳು.

ದಾರಿ ಹಿಡಿದು ಮುದುಕನೊಬ್ಬ ಹಳ್ಳಿಯ ಕಡೆಗೆ ಸಾಗಿದ್ದ. ಗೌರಿ ನಿಟ್ಟಿಸಿ ನೋಡಿದಳು: ತಮ್ಮ ಹಳ್ಳಿಯ ಹಿರಿಯ ಹೊಲೆಯ ಹನುಮಪ್ಪ. ಹೊರೆಯನ್ನು ಹೊರಿಸಿಕೊಳ್ಳುವುದು ಅವಶ್ಯವಿದ್ದಿತಾದರೂ 'ಈ ಮುಟ್ಟಂಜೆಯ

ವೇಳೆಯಲ್ಲಿ, ಹೊಲೆಯನನ್ನು ಮುಟ್ಟಿ ಹೊರಗಿಕೊಳ್ಳುವದು ಹೇಗೆ?' ಎಂದು ಸ್ವಲ್ಪ ಕಾಲ ಉಯ್ಯಾಲೆಯಾಡಿತು ಮನಸ್ಸು. ಕತ್ತಲು ಸಮೀಪಿಸುತ್ತ ಬಂದುದರಿಂದ, ಹೆಚ್ಚು ವೇಳೆಯನ್ನು ಹೊಲದಲ್ಲಿಯೆ ಇದ್ದು ಕಳೆಯಲಿಕ್ಕೆ ಸಾಧ್ಯವಿರಲಿಲ್ಲ. ನಿರ್ವಾಹವಿಲ್ಲದೆ ಗೌರವ್ವ ಕೂಗಿದಳು:

"ಹನಮಪ್ಪಾ; ಏಯ್ ಹನಮಪ್ಪಾ...."

ಹನುಮಪ್ಪನು ನಿಂತು ಕೇಳಿದ:

"ಯಾಕ ಗೌಡತೀ! ಚಂಜಿ ಆತು; ಇನ್ನೂ ಇಲ್ಲೇ ಇದ್ದೀರಲ್ರವ್ವಾ ನೀವು?"

"ಈಗ ಹೊಂಟು ನಿಂತೇನಿ ನೋಡು; ಅಂವ ಸಂತಿಗೆ ಹೋಗ್ಯಾನು; ಹೊತ್ತಿರತನಕ ಬರತಾನೇನೋ ಅಂತ ದಾರೀ ನೋಡಿದೆ. ಇನ್ನೂ ಬರಲೇ ಇಲ್ಲ ನೋಡಪಾ! ಈ ಮೇವಿನ ಪೆಂಡೀ ಹೊತಗೋಬೇಕಂದರ, ಒಬ್ಬಾಕಿಗೇ ನನಗ ಮಿಸಕವೊಲ್ಲದು. ಒಂದೀಟು ನೀನs ಹೊರಸಬೇಕಯ್ಯಾ ಹನಮಪ್ಪಾ!"

"ಇದೇಂತಾ ಮಾತು ಗೌರವ್ವಗೌಡತೀ? ನಾ ಮುಟ್ಟಿ ಪೆಂಡೀ ಹೊರಿಸಲ್ಯಾ? ಬಸರು ಹೆಣ್ಣುಮಗಳು! ಮೂರೂ ಚಂಜೀ ಯಾಳೇ!"

"ಈಗ ಏನು ಮಾಡೂದೈತಿ ಹನಮಪ್ಪಾ! ಹೊರೀ ಬಾಳ ಜಡಾ ಐತಿ. ಹೊರಸಲಾಕ ಇಲ್ಲಿ ಮತ್ತ ಯಾರೂ ಇಲ್ಲ. ಹಾಂ ಹಾಂ ಅನ್ನೂದರೊಳಗs ಮುಂದಾವಳ ಕಪ್ಪೀಕ್ಕೈತಿ! ಹೋಗಲಿ, ಮನೀಗೆ ಹೋದ ಮ್ಯಾಗ ಏನಾರೇ ಆದೀತಂತ; ಈಗ ಇವಷ್ಟs ಹೊರಿಸಿ ಹೋಗು!"

ಹನುಮಪ್ಪ ಮುಂದೆ ಸಾಗಿ ಬಂದ ಮುಪ್ಪಿನ ವಯಸ್ಸು ಬಂದು ಗೌರವ್ವನೆದುರು ನಿಂತು ನೋಡಿದ. ಚೊಚ್ಚಲು ಬಸಿರೆ. ತುಂಬುಮೊಗದಲ್ಲಿ ಚೆಲುವು ತುರುಕಿ ನಿಂತಿದ್ದಿತು. ಸಂಧಿಕಾಲದ ಕೆಂಬೆಳಕು ಆ ಚೆಲುವಿಗೊಂದು ಒಪ್ಪಕೊಟ್ಟಿದ್ದಿತು. ಸಂಜೆಯ ಸುಳಿಗಾಳಿಗೆ ಒಲೆದಾಡುವ ಮುಂಗುರುಳು, ಆ ಚೆಲುವಿಗೆ ಚೈತನ್ಯ ತುಂಬುತ್ತಿತ್ತು. ಮುದುಕ ಹನುಮಪ್ಪ ಮುಂದೆ ನಿಂತ, ಇದನ್ನೆಲ್ಲ ಸಟ್ಟಿಸಿ ನೋಡಿದ ಆಶೆಯೊಂದು ಹೃದಯದಲ್ಲಿ ಮಿಂಚಿತು: 'ಇಂತಹ ಚೆಲುವಿನ ಸಂಬಂಧ ತನಗೂ ಇರಬಾರದೆ?' ಎಂದೆನಿಸಿತ್ತೇನೋ! ಭಾವಾವಿಷ್ಟವಾಗಿ ತಟ್ಟನೆ ಮಾತನಾಡಿದ:

“ ಹೊರೀ ಹೊರಸ್ತೀನಿ ಯಪ್ಪಾ ! ಆದರ ನಂದೊಂದು ಮಾತನ್ನ ನಡಸಿಕೊಡಬೇಕು ನೀನು ! ”

“ ಅದೇನ ಮಾತಪ್ಪಾ ನಿಂದು....ನಾ ನಡಿಸಿಕೊಡೂದು ? ”

ಹನುಮಪ್ಪ ಮಂಗಳನಗೆ ನಗುತ್ತ ಹೇಳಿದ :

“ ಇನ್ನೇನೂ ಇಲ್ಲ ತಾಯೀ ! ನೀನು ಹೆಣ್ಣುಮಗಳನ್ನ ಹೆತ್ತರ........ ಆದನ್ನ ನನ್ನ ಮೊಮ್ಮಗ ಚಿಕ್ಕೆಲ್ಲಗ ಮದಿವೀಮಾಡಿ ಕೊಡಬೇಕು ನೋಡು ! ”

ಇದೊಂದು ನಗೆಯಾಟದ ಮಾತೆಂದು ಗೌರವ್ವನಿಗೆನಿಸಿತು. ತಾನು ಒಕ್ಕಲಿಗರವಳು; ಹನುಮಪ್ಪ ಹೊಲೆಯರಾತ ! ಜನ್ಮಜನ್ಮಾಂತರದಲ್ಲಾದರೂ ಈ ಸಂಬಂಧವು ಸಂಭವನೀಯವೆನಿಸೀತೆ ? ಹನುಮಪ್ಪನ ಮಾತಿಗೆ ಗೌರಿ ತಾನೂ ನಗೆಮಾತನ್ನಾಡಿದಳು :

“ ಅನಕಾ ಹೆಣ್ಣುಮಗಳಾದರೂ ಹುಟ್ಟಲೇಳು; ಹುಟ್ಟಿ ದೊಡ್ಡಾಕಿ ಆದಮ್ಯಾಗ ಅಲ್ಲಾ....ಮದಿವೀ-ಗಿದಿವೀ ? ಬಾ ಬಾ, ಹೊರಸ ಬಾ ! ”

“ ಚೇ ಚೇ, ಹಾಂಗ ಆಗೂ ಹಾಂಗಿಲ್ಲ. ಇಂದsi ನೀ ಹೆಣ್ಣು ಕೊಡತೀನಂತ ಮಾತು ಕೊಡಾಕs ಬೇಕು ! ”

ಎಲ್ಲವೂ ಚೇಷ್ಟೆಯ ಮಾತೆಂದು ತಿಳಿದು ಗೌರವ್ವ ನುಡಿದಳು :

“ ಆಗಲೇಳಪಾ. ಕೊಡತೀನಿ ! ಈಗ ಹೊರೀ ಹೊರಸು ಮುಂಚೆ; ಕತ್ತಲು ಮಬ್ಬಾಗಾಕ ಹತ್ತೈತಿ ! ”

“ ಇದು ಸತ್ಯ ಮಾತs ಗೌಡತೀ ? ”

“ ಹೂಂ ಹೂಂ, ಸತ್ಯ ಮಾತು; ಹೊರಸು ಮುಂಚೆ ! ”

ಹನುಮಪ್ಪ ಹೊರೆಯನ್ನೆತ್ತಿ ಹೊರಿಸಿದ. ಗೌರಮ್ಮ ಹೊತ್ತುಕೊಂಡು ಮನೆಗೆ ಮರಳಿದಳು. ಅಂದು ಹೊಲದಲ್ಲಿ ನಡೆದ ಸಂಗತಿಯನ್ನು ಯಾರೆದುರೂ ಆಕೆ ಹೇಳಲಿಲ್ಲ. ರಾತ್ರಿಯ ಹೊತ್ತಿನಲ್ಲಿ ಹೊಲೆಯನನ್ನು ಮುಟ್ಟಿದ ಮಾತು ಯಾರಿಗೂ ಗೊತ್ತಾಗಬಾರದೆಂದು ಅವಳ ಅಪೇಕ್ಷೆ; ಅತ್ತೆ-ಗಂಡಂದಿರೆದುರೂ ಈ ವಿಷಯದಲ್ಲಿ ಗೌರಿ ಉಸಿರೆತ್ತಲಿಲ್ಲ.

೨

ಒಂಬತ್ತು ತಿಂಗಳು ತುಂಬಿ ಗೌರವ್ವ ಹೆಣ್ಣುಮಗುವನ್ನೇ ಹೆತ್ತಳು. ತಾಯ್ತನವನ್ನು ಬಯಸುವ ಗರತಿಗೆ ಹೆಣ್ಣುಮಗುವಾದರೇನು, ಗಂಡುಮಗುವಾದರೇನು ? ಲಚಮವ್ವ ಮಾತ್ರ ಮೊದಲೊಮ್ಮೆ ಹೆಣ್ಣೆಂದು ಮನವನ್ನು ಮುದುಡಿಸಿದಳಾದರೂ, ಮೊಮ್ಮಗಳಿಗೆ ಅಮ್ಮನಾದೆನೆಂಬ ಸಂತೋಷದಲ್ಲಿ ಓಲಾಡುತ್ತ, ಗಂಡು-ಹೆಣ್ಣುಗಳ ವಿಷಮಭಾವವನ್ನು ಮರೆತುಬಿಟ್ಟಳು. ಸಂಕಪ್ಪನ ಮುಖದಲ್ಲಿ ಯಾವ ವ್ಯತ್ಯಾಸವೂ ಕಾಣಲಿಲ್ಲ. ಹನ್ನೆರಡನೆಯ ದಿನ ಮುದುಕಿ, ಮಗುವಿಗೆ ' ಮಾದೇವಿ ' ಎಂದು ಹೆಸರನ್ನಿರಿಸಿದಳು. ಹೊಲೆಯರ ಹನುಮಪ್ಪ ಅಂದು ಮಗುವಿಗೆ ಅಂಗಿ-ಟೊಪ್ಪಿಗೆಗಳನ್ನೂ ಬಾಣಂತಿಗೆ ಕುಪ್ಪಸದ ಕಣವನ್ನೂ ಕಳುಹಿದನು. ಸಂಕಪ್ಪ-ಲಚಮವ್ವರಿಗೆ ಬೇಕಾದವರೆಲ್ಲ ಹೀಗೆ ಕೂಸು-ತಾಯಿಯರಿಗೆ ಉಡುಗೊರೆ ಕಳುಹಿದ್ದರು. ಹನುಮಪ್ಪ ಕಳುಹಿದ ಉಡುಗೊರೆಯ ಬಗೆಗೆ ಮುದುಕಿಗೆ ಆಶ್ಚರ್ಯವೆನಿಸಿತಾದರೂ, ಹತ್ತರ ಕೂಡ ಹನ್ನೊಂದನೆಯದಾಗಿ ಬಂದುದರಿಂದ, ಅವಳು ಅದರ ಬಗೆಗೆ ಮಾತನ್ನೇನೂ ಎತ್ತಲಿಲ್ಲ.

ಮಾದೇವಿ ತಾಯಿಯ ಚೆಲುವಿನ ಮೂರ್ತಿಯಾಗಿದ್ದಳು. ದಿನಕ್ಕೊಂದು ಚೆಂದವಾಗಿ ಬೆಳೆಯುತೊಡಗಿದಳು. ಮಗುವಿನ ಮುದ್ದಾಟದಲ್ಲಿ ತಾಯಿ ಗೌರವ್ವ, ಹಗಲು-ಇರುಳುಗಳನ್ನು ಕೂಡ ಮರೆತಳು.

ನಾಗರಪಂಚಮಿ ಬಂದಿತು. ಹಳ್ಳಿಯಲ್ಲಿ ಎಲ್ಲೆಲ್ಲಿಯೂ ಹಬ್ಬದ ಉಬ್ಬು, ಉಲ್ಲಾಸ ! ಹಬ್ಬಕ್ಕೆ ಮೊದಲ ದಿನ ಹೊಲೆಯರ ಹನುಮಪ್ಪ ಸಂಕಪ್ಪನ ಮನೆಗೆ ಬಂದ; ಹಳ್ಳಿಯ ಸಂಪ್ರದಾಯದಂತೆ, ಕೊಡುಗೂಸಿಗೆ ಸಲ್ಲಿಸಬೇಕಾದ ' ದಂಡೆ ಕುಬುಸ ' ತಂದು ಗೌರವ್ವನ ಮುಂದೆ ಇರಿಸಿದ. ವಿಸ್ಮಯಗೊಂಡು ಗೌರವ್ವ ಕೇಳಿದಳು :

" ಇದೇನಪ್ಪಾ ಹನಮಪ್ಪಾ, ಇದೇನ ತಂದಿ ? "

" ಸೊಸೀಗೆ ದಂಡೀ-ಕುಬಸಾ ತಂದೀನವ್ವಾ ಹಬ್ಬಕ್ಕ ! "

ಬೇಡ ಬೇಡವೆಂದು ಗೌರಿ ಎಷ್ಟು ಹೇಳಿದರೂ ಕೇಳದೆ, ತಂದದ್ದನ್ನೆಲ್ಲ ಹನುಮಪ್ಪ ಅಲ್ಲಿಯೇ ಇರಿಸಿ ಹೊರಟುಹೋದ. ' ಇದೆಂತಾ ಹುಚ್ಚು ಮುದುಕ

ಇದು ? ತಾ ನೋಡಿದರೆ ಸೊಲ್ಲ್ಯಾ; ಸೊಸೀಗೆ ದಂಡಿ–ಕುಬಸಾ ತಂದಾನಂತ ! ಎಲ್ಲಾ ಮೋಜಿನ ಮಟ್ಟೀ ಐತಿ !' ಎಂದು ನುಡಿದು ಗೌರಿ, ಹಿಂದೊಂದು ದಿನ ಹೊಲದಲ್ಲಿ ನಡೆದ ವಿಷಯವನ್ನು, ಏನೇನೋ ಕೇಲು–ಮೇಲು ಮಾಡಿ ಅತ್ತೆಯೆದುರು ಹೇಳಿದಳು. ಆಗ ಅತ್ತೆ ನುಡಿದಳು :

"ಏನೋ, ಪಿರೀತಿ ಬಂದು ತಂದು ಕೊಟ್ಟೈತೇಳು ಮುದುಕ ! ಇರವೊಲ್ಲ್ದ, ಇಟುಕೊಂಡು ಬಿಡು ಒಳ್ಳ್ಯಾಕ."

ಅತ್ತೆಯ ಒಪ್ಪಿಗೆ ದೊರೆತ ಮೇಲೆ ಗೌರಿ, ದಂಡೆ–ಕುಬಸದ ಗಂಟನ್ನು ತೆಗೆದು ಒಳಗಿಟ್ಟಳು. ಎರಡನೆಯ ವರ್ಷದ ನಾಗರಪಂಚಮಿಗೂ ಹನುಮಪ್ಪ ದಂಡೆ–ಕುಬಸ ತರುವುದನ್ನು ಮರೆಯಲಿಲ್ಲ. ಮುದುಕನ ಮಂಕತನಕ್ಕೆ ಅತ್ತೆ, ಸೊಸೆ ಇಬ್ಬರೂ ಒಳಗೊಳಗೇ ನಗುತ್ತಲಿದ್ದರು. ಮೂರನೆಯ ಪಂಚಮಿಗೂ ದಂಡೆ–ಕುಬಸ ಬಂದಿತು. ಅದನ್ನೂ ತೆಗೆದುಕೊಂಡು ಮುದುಕನನ್ನು ಸಮಾಧಾನಗೊಳಿಸಿ ಆಯಿತು.

ಈ ಸಲದ ಬೇಸಗೆಯಲ್ಲಿ ಮೊಮ್ಮಗನ ಮದುವೆ ಮಾಡಿಬಿಡಬೇಕೆಂದು ಹನುಮಪ್ಪ ನಿರ್ಧರಿಸಿದ. ತನಗೂ ವಯಸ್ಸಾಯಿತು. ಮೊಮ್ಮಗ ತಾಯಿ–ತಂದೆಗಳಿಲ್ಲದ ತಬ್ಬಲಿ. ಏನಾದರೂ ಹೆಚ್ಚು–ಕಡಮೆಯಾದರೆ, ಮೊಮ್ಮಗನ ಮದುವೆ ಯಾರು ಮಾಡುವರು ?

ಒಂದು ದಿನ ಬೆಳಗಿನಲ್ಲಿದ್ದು ಹನುಮಪ್ಪ ಸಂಕಪ್ಪನ ಮನೆಯ ಕಡೆಗೆ ಬಂದ: ದಿನವಲ್ಲದ ದಿನದಲ್ಲಿ ಹನುಮಪ್ಪನ ಮೈಮೇಲೆ ಹೊಸ ಬಟ್ಟೆ— ರೇಶಿಮೆಯ ಕರಿ ಕಟ್ಟಿದ ಕರಿಯ ಕಂಬಳಿ— ಕಾಲಲ್ಲಿ ಹೊಸ ಎಕ್ಕಡ. ಬಂದು ಹನುಮಪ್ಪ ಸಂಕಪ್ಪನ ಮನೆಯ ಮುಂಗಟ್ಟೆಯ ಮೇಲೆ ಕುಳಿತುಕೊಂಡ. ಅವನ ವೇಷಭೂಷಣಗಳನ್ನು ನೋಡಿದ ಸಂಕಪ್ಪ ಅಚ್ಚರಿಗೊಂಡು ಕೇಳಿದ :

"ಏನಪಾ ಹನಮಪ್ಪಾ ಈಗ ಬಂದಿ........ನಸಿಕೆನ್ಯಾಗ ಎದ್ದು ?" ಹನುಮಪ್ಪ ಹೇಳತೊಡಗಿದ :

"ಬರಲೇಬೇಕಾತೂ ಅಂತಽ ಬಂದಿನಿ. ಬಷ್ಟಿಗೀ (ನಿಶ್ಚಯ) ಹಾಕೂದು ಎಂದ ಮಾಡೋಣೂ ಅಂತ ಕೇಳಿಕೊಂಡು ಹೋಗ್ಲಾಕ ಬಂದೆ. ಈ ವರಷ

ಬ್ಯಾಸಿಗ್ಯಾಗs ನನ್ನ ಮೊಮ್ಮಗನ ಮದಿವೀ ಮಾಡೇ ಬಿಡಬೇಕಂತ ಯಿಚಾರ ಬಂದೈತ್ರಿ !”

“ಹಿಂಗೇನು ? ಹಾಂಗಾದರ ಹೋಳಿಗೀ ಎಬ್ಬಿಸೇದಿ ಅನ್ನು ! ಪಾಪ ತಾಯೀ-ತಂದೀ ಇಲ್ಲದ ಪರದೇಶಿ ಮಗಾ ! ಕೊಡೆಮ ಬಿಡು ಇದs ವರುಸs ! ಅದೆಲ್ಲಾ ಆಯ್ತುಪಾ ! ಹೆಣ್ಣು ಎಲ್ಲಿಂದು ಗೊತ್ತುಮಾಡೀದಿ ?”

“ಪಾತ್ಕ್ಲೀಪು ಗೊತ್ತುಮಾಡೂದು ಗೌಡಾ ! ನಿನ್ನ ಮಗಳನ್ನs ತೊಗೊಳ್ಳೂದೂ ಅಂತ ಎಂದೋ ಗೊತ್ತಾಗಿ ಹೋಗೇಯ್ತಲ್ರಿ ! ಈಗ ಮೂರು ವರ್ಸಾತ; ಪಂಚಮೀ ಹಬ್ಬಕ್ಕ ದಂಡಿ-ಕುಬಸಾ ಸುದ್ದಾ ತಂದು ಮುಟ್ಟಿಸಿ ಬಿಟ್ಟೇದೀನ್ರಿ; ಯಾಕ, ಏನೂ ಗೊತ್ತಿಲ್ಲದವರ್ಹಾಂಗs ಮಾತಾಡ್ತೀರಲ್ಲಾ !”

ಸಂಕಪ್ಪನಿಗೆ ತುಂಬ ಆಶ್ಚರ್ಯ. ಆ ಆಶ್ಚರ್ಯದ ಭರದಲ್ಲಿಯೇ ಕೇಳಿದ :

“ಇದೇನೋ ಹನಮಪ್ಪಾ ಮುಪ್ಪಿನ ಕಾಲಕ್ಕ ನಿನಗ ಹುಚ್ಚುಗಿಚ್ಚು ಹಿಡೀತೋ ಏನ ಮಣ್ಣಾ ! ನೀ ಮಾತಾಡ್ತೀಯರೇ ಏನು ? ನಿಂದ ಯಾವ ಕುಲಾ, ನಮ್ಮ್ದು ಯಾವ ಕುಲಾ ? ನಿಮ್ಮ ಮನೀಗೆ ನಾವು ಹೆಣ್ಣು ಕೊಡೂದಂದರ ಇದೇನ ಮಾತಲೇ ನಿಂದು ?”

“ಇದನೋಡು ಗೌಡಾ, ನಾ ಖರೇ ಮಾತಿನಾಂವ ! ಈ ಕುಲಾ ಗಿಲಾ ನಾಯೇನೂ ಕೇಳೂದಿಲ್ಲ. ಮಾತುಕೊಟ್ಟ್ಹಾಂಗ ನಡಕೊಳ್ಳೊ ನಡತಿ ಐತೋ ಇಲ್ಲೋ ನಿಮ್ಮ ಮನಿತನದಾಗ ?”

“ಮಾತುಕೊಟ್ಹಾಂಗ ನಡಕೊಳ್ಳೊದಂದರ ಏನಲೇ ? ಯಾರು ನಿನಗ ಮಾತು ಕೊಟ್ಟವರು ?”

“ಹೆಣ್ಣು ಕೊಡಕೊಂಡೋ ಮಾತಿನಾಗ, ಹೆಣ್ಣಿನ ತಾಯಿನs ಅಲ್ಲೇನು ಮಾತು ಕೊಡುವಾಕಿ ಗೌಡಾ—?”

“ಅಂದರ ಏನಲೆ ? ಹೆಣ್ಣಿನ ತಾಯಿ ನಿನ್ನ ಮನೀಗೆ ಹೆಣ್ಣು ಕೊಡ-ತೀನಂತ ಮಾತು ಕೊಟ್ಟಾಳs ? ಹೋಗೋ ಹೋಗು ಹುಚ್ಚಾ !”

ಹನುಮಪ್ಪ ಗಟ್ಟಿಯಾಗಿ ನುಡಿದ.

“ಗೌಡ್ರ ಗೌಡತಿನ್ನ ಇಲ್ಲೆ ಕರೀರಿ; ಎಲ್ಲಾ ಗೊತ್ತಾಗಕ್ಕೈತಿ !”

ಸಂಕಪ್ಪ ಹೆಂಡತಿಯನ್ನು ಕೂಗಿ ಕರೆದ. ಗೌರವ್ವ ಹೊರಗೆ ಬಂದು ಏನೆಂದು ಕೇಳಿದಳು. ಸಂಕಪ್ಪ ಹನುಮಪ್ಪನನ್ನು ತೋರಿಸುತ್ತ ನುಡಿದ :

" ಏಸಂತಾನ ಇಂವ ಕೇಳಿದ್ದೇನು ? ಇಂವಗ ಏನಂತ ಮಾತು ಕೊಟ್ಟೇದಿ ನೀನು ? "

ಗಾಬರಿಗೊಂಡವಳಾಗಿ ಗೌರಿ ಕೇಳಿದಳು :

" ನಾಯೇನ ಕೊಟ್ಟೇವಿ ಇಂವಗ ಮಾತು ? "

ಹನುಮಪ್ಪ ನಿಶ್ಚಯಸ್ವರದಲ್ಲಿ ಕೇಳಿದ :

" ಯವ್ವಾ ಯವ್ವಾ, ಹಿಂಗ್ಯಾಕ ಮಾತಾಡತೀ ? ಆ ದಿನಾ ಮೇಪಿನ ಪೆಂಡೀ ಹೊರಿಸಿಕೊಳ್ಳೂ ಮುಂದ ಕೊಟ್ಟ ಮಾತು ದ್ಯಾಸದಾಗ ಉಳಿ-ದಿಲ್ಲೇನು ? "

" ನಾಯೆಂದೇ ಮುದುಕಾ, ನಿನ್ನ ಕಡೆಂದs ಮೇವಿನ ಪೆಂಡೀ ಹೊರಿಸಿಕೊಂಡಿದ್ದ ? ಯಾಕ ವೈವ್ಯಾಗ ಎಚ್ಚರ ಗಿಚ್ಚರ ಐಕ್ಯೋ ಇಲ್ಲೋ ? "

" ತಂಗೀ, ನೋಡಿಕ್ಲಿ ! ನಾನು ಹುಟ್ಟಿದ ವ್ಯಾಗ, ನನಗ ತಿಳದ್ಹಾಂಗ— ಎಂದೂ ಸುಳ್ಳು ಮಾತಾಡಿಲ್ಲ ! ಆ ದಿನಾ— ಹೆಣ್ಣು ಹಡದರ ನನ್ನ ಮೊಮ್ಮಗ್ಗ ಕೊಡಬೇಕೂ ಅಂತ ಮಾತು ತಗೊಂಡು, ಆ ವ್ಯಾಗ ನಿನಗ ನಾ ಮೇವಿನ ಹೊರೀ ಹೊರಿಸಲಿಲ್ಲs ? ' ಆಗಲಿ ' ಅಂತ ನೀನು ಒಪ್ಪಿಗಿ ಕೊಡ-ಲಿಲ್ಲs ? "

ಗೌರವ್ವನ ಮುಖ ಪೆಚ್ಚಾಗಿ ಹೋಯಿತು. ಕಂಗೆಟ್ಟವಳಾಗಿ ಕೂಗಿ-ಕೊಂಡಳು :

" ಹೋಗು—ಹೋಗೋ ಮುದಿಹುಚ್ಚಾ ! ಯಾರದೋ ಮಾರಿಗೆ ಮಸಿ ಹಚ್ಚಾಕ ಬಂದೀ ಏನ್ಯೋ ! ನಿನ್ನ ಮೊಮ್ಮಗ್ಗ ಹೆಣ್ಣು ಕೊಡತೀನಂತ ನಾನು ಎಂದಾರೇ ಒಪ್ಪಿಗೀ ಕೊಟ್ಟೇನೇನು ? ನಾಕಮಂದಿ ಏನಂದಾರು; ತಿಳೀಬಾರದs ನಿನಗ ? "

ಶಾಂತಸ್ವರದಲ್ಲಿಯೇ ಹನುಮಪ್ಪ ಹೇಳಿದ.

"ಯವ್ವಾ, ಲೋಕದಾಗಿಂದ ದೇವರೂ, ಧರ್ಮಾ, ನ್ಯಾಯಾ ಏನ ಸತ್ತು

ಹೋಗಿಲ್ಲ ! ನಾಕ ಮಂದಿನ್ನ ಕೂಡಿಸತೀನಿ; ಅವರ ಮುಂದs ಈ ಮಾತಿನ ನಿರ್ಣಯ ಆಗಿಹೋಗಲಿ !"

ಹನುಮಪ್ಪ ದಿಗ್ಗನೆ ಎದ್ದು ನಡೆದುಬಿಟ್ಟ. ಆಶ್ಚರ್ಯ–ಸಂತಾಪಗಳು ಸಂಕಪ್ಪನನ್ನು ಕಂಗೆಡಿಸಿದ್ದವು.

೨

ಹಳ್ಳಿಯ ಚಾವಡಿಯಲ್ಲಿ ಹನುಮಪ್ಪ ಪಂಚಾಯತಿ ಕೂಡಿಸಿದ. ಪಂಚರು ಗೌರವ್ವನನ್ನೂ, ಸಂಕಪ್ಪನನ್ನೂ ಕರೆಯಿಸಿದರು. ವಿಚಾರಣೆಗೆ ಪ್ರಾರಂಭವಾಯಿತು. ಹನುಮಪ್ಪ ತನ್ನ ದೂರನ್ನು ಯಥಾಕ್ರಮ ಹೇಳಲು ತೊಡಗಿದ. ಅವನ ದೂರು ಸರಿಯಾದುದೆಂದು ಯಾರಿಗೂ ಎನಿಸಲೊಲ್ಲದು. ನೆರೆದ ಜನರು ಮುದಿಹುಚ್ಚಿನ ಒಡಬಡಿಕೆಯಿದೆಂದು ನಗಲು ತೊಡಗಿದರು. ಹನುಮಪ್ಪ ತನ್ನ ದೂರನ್ನು ಹೇಳಿ ಮುಗಿಸಿದ. ಪಂಚರಿಗೆ ಹನುಮಪ್ಪನ ಮಾತು ಸಮಂಜಸವಾದುದೆಂದು ಹೇಗೆ ಕಾಣಬೇಕು ? ಆದರೂ ವಿಚಾರಣೆಯ ನಿಯಮಕ್ಕನುಸಾರವಾಗಿ ಸಂಕಪ್ಪನ ಹೇಳಿಕೆಯನ್ನು ಕೇಳಿದರು. ತನಗೊಂದೂ ಗೊತ್ತಿಲ್ಲವೆಂದು ಆತ ಹೇಳಿದ. ಗೌರವ್ವನನ್ನು ಕೇಳಿದರು; ಆಕೆ ಅತ್ತು ಕರೆದು ಆಕ್ಕಸಮಾಡಿ 'ಹೊಲ್ಯಾರ ಮನಿಗೆ ಹೆಣ್ಣು ಕೊಡ್ಲಾಕ ನಾ ಎಂದಾದರೂ ಒಪಿಗೊಂಡೀನೇನ್ರಿ ?' ಎಂದು ಕೇಳಿದಳು. ಗೌರವ್ವನ ಖಂಡಿತವಾದ ಮಾತುಗಳನ್ನು ಕೇಳಿದ ಪಂಚರಿಗೆ, ಹನುಮಪ್ಪನ ದೂರು ಸತ್ಯವೆಂದು ಒಬ್ಬರಿಗೂ ಎನಿಸಲೊಲ್ಲದು. ಎಲ್ಲರೂ ಸುಳ್ಳುಗಾರನೆಂದು ಹನುಮಪ್ಪನನ್ನು ಬೆದರಿಸಿದರು. ಆಗಲೂ ಆ ಮುದುಕ ಗಟ್ಟಿಮುಟ್ಟಾಗಿ ಹೇಳಿದ:

"ಯಪ್ಪಾ, ಪಂಚರು ಬ್ಯಾರೇ ಅಲ್ಲ, ಪರಮೇಸೂರ ಬ್ಯಾರೇ ಅಲ್ಲ ! ನನಗ ತಿಳಿಯಲಾಕ ಹತ್ತಿದ ಮ್ಯಾಗ, ಇಂದಿನ ತನಕಾ ನಾ ಒಂದೂ ಸುಳ್ಳು ಮಾತು ಆಡಿಲ್ಲ. ಹೊಲ್ಯಾನ ಮಾತಂತ ನೀವು ಹೀಂಗ ಹೀಯಾಳಿಸಿ ಬಿಡಬ್ಯಾಡ್ರಿ ! ಪುಟ್ಟಪೂರಾ ಇಚಾರ ಮಾಡಿ, ಈ ನ್ಯಾಯ ಬಗೀಹರಿಸರಿ !"

ಒಬ್ಬ ಪಂಚ ಕೇಳಿದ :

" ಇನ್ನ ಹ್ಯಾಂಗೋ ಹನುಮಪ್ಪಾ ನಿನ್ನ ನ್ಯಾಯಾ ಬಗೀಹರಸೂದು ! ಹೊಲ್ಯಾರ ಮನೀಗೆ ಉತ್ತಮರು ಯಾರಾದರೂ ಹೆಣ್ಣ ಕೊಡತೀನಂತ ಮಾತು ಕೊಟ್ಟಾರೇನಲೇ ? ಇದೆಲ್ಲೀದು ನಿನ್ನ ನ್ಯಾಯಾ ? "

" ಈ ಯವ್ವ ಸತ್ಯವಾಗಿಯೂ ಮಾತಕೊಟ್ಟಾಳ್ರೀ ಯಪ್ಪಾ ! "

ಪಂಚರಲ್ಲಿ ಹಿರಿಯನೊಬ್ಬ ಸ್ವಲ್ಪ ಯೋಚಿಸಿ ಕೇಳಿದ:

" ಹೂಂ, ಆಗಲಿ ಹನಮಪ್ಪಾ ! ನಿನ್ನ ಮಾತS ನಿಜಾ ಅಂತ ಅನ್ನೋಣ ! ಗೌರವ್ವನ ಕಡಿಂದ ನೀ ಮಾತು ತಗೊಂಡದ್ದಕ್ಕ ಸಾಕ್ಷೀ ಯಾರಾದರೂ ಇದ್ದಾರೇನು ? "

" ಸಾಕ್ಷಿನ್ರೀ ! ಅಲ್ಲಿ ಇನ್ನ್ಯಾರಾದರೂ ಇದ್ದರ, ಈ ತಾಯಿ ನನ್ನ ಕಡಿಂದS ಯಾಕ ವೇವಿನ ಪೆಂಡೀ ಹೊರಿಸಿಕೊಳತಿದ್ದಳ್ರಿ ? ಮನಸ್ಯಾರು ಯಾರೂ ನನಗ ಸಾಕ್ಷೀ ಇಲ್ಲ. ನನ್ನ ಮಾತು ನಿಜಾ ಇದ್ದರ, ನನ್ನ ತಾಯಿ ಗುಡದವ್ವನS ನನಗ ಸಾಕ್ಷೀ ಆಗಿ ನಿಲ್ಲಬೇಕು ! " ಹನುಮಪ್ಪ ಹೇಳಿದ.

" ನಮಗೇನೋ ! ಸಾಕ್ಷೀ ಒಂದಾದರ ಸಾಕು ! ಗುಡ್ಡದವ್ವನಿಂದ ಹೇಳಸು, ಇಲ್ಲಾ ಮಡ್ಡೆಪ್ಪನಿಂದ ಹೇಳಸು ! " ಪಂಚರ ಹಿರಿಯನ ಮಾತಿದು.

" ಹೊಲದ ಕಡೆ ನಡೀರಿ, ಹೋಗೋಣು ಹಾಂಗಾದರ ! ನನಗೂ ಒಮ್ಮೆ ಈ ಸುಳ್ಳು ಖರೇದ ಪರೀಕ್ಷಾ ಮಾಡಿಬಿಡಬೇಕಾಗೇತಿ ! ಈ ನನ್ನ ಮಾತು ಸುಳ್ಳಾದರ, ಇನ್ನ ಮುಂದ ನಾ ಎಂದೂ ಖರೇ ಮಾತಾಡೂದಿಲ್ಲ ಯಪ್ಪಾ ! "

ಪಂಚರೆಲ್ಲ ಎದ್ದು ಸಂಕಪ್ಪನ ಹೊಲದ ಕಡೆಗೆ ಹೊರಟರು; ಮುಂದೆ ಹನುಮಪ್ಪ ನಡೆದಿದ್ದ. ಎಲ್ಲರಿಗಿಂತ ಹಿಂದೆ ಸಂಕಪ್ಪ, ಗೌರವ್ವ ಹೊರಟಿದ್ದರು. ಎಲ್ಲರೂ ಹೊಲವನ್ನು ತಲುಪಿದ ಮೇಲೆ, ಹಿರಿಯ ಪಂಚ ಹೊಲದ ಅಂಚಿನಲ್ಲಿ ನಿಂತು ನುಡಿದ :

" ಕರೀತಿ ಏನಸಾ ಹನಮಪ್ಪಾ ? ಯಾರನ್ನ ಕರೀತಿ ಕರಿ; ಸಾಕ್ಷೀ ಹೇಳಸು ! "

"ಇಲ್ಲದವರನ್ನ ಇನ್ನೆಲ್ಲಿಂದ ಕರೀಲ್ರಿ! ನನ್ನ ತಾಯಿ ಗುಡದವ್ವನs ನನಗ ಗತಿ!"

"ಆಕಿನ್ನs ಕರಿ, ನಾವೆಲ್ಲಿ ಬ್ಯಾಡಾ ಅಂತೀವಿ!" ಅಣಕದ ಧ್ವನಿಯಲ್ಲಿ ಹಿರಿಯ ನುಡಿದ.

ಹನುಮಪ್ಪ ಧೈರ್ಯದಿಂದ ಬಂದು ನಿಂತ. ಗುಡ್ಡದ ಕಡೆಗೆ ಮುಖ ಮಾಡಿ ಕೈಗಳನ್ನು ಮುಗಿದು, ಗಟ್ಟಿಯಾಗಿ ಬೇಡಿಕೊಂಡ:

"ನಂತಾಯೀ ಗುಡದವ್ವಾ! ನೀನು ಸತ್ಯುಳ್ಳಾಕಿ ಆದರ, ಈ ಪಂಚರಿಗೆ ನನ್ನ ಮಾತು ನಿಜಾ ಅನಸೂ ಹಾಂಗ ಏನಾದರೂ ಒಂದು ಸಾಕ್ಷಿ ಕೊಡು ತಾಯೀ!"

ಎಲ್ಲರೂ ಸುಮ್ಮನೆ ನಿಂತು ನೋಡುತ್ತಿದ್ದರು. ಹನುಮಪ್ಪನ ಈ ನಡೆವಳಿಯಲ್ಲಿ ಯಾರಿಗೂ ನಂಬುಗೆ ಕಾಣುತ್ತಿರಲಿಲ್ಲ. ಆಗ ಸಾಕ್ಷಿಯೇನೂ ದೊರೆಯಲಿಲ್ಲ. ಕೂಡಿದವರೆಲ್ಲ ಕೊಂಕುಮಾತುಗಳನ್ನಾಡಿ ಹನುಮಪ್ಪನನ್ನು ಹಂಗಿಸಿದರು. ಹನುಮಪ್ಪ ಮತ್ತೆ ಕೈಮುಗಿದು ಬೇಡಿಕೊಂಡ:

"ಯವ್ವಾ, ಬಾಳ ಪರೀಕ್ಸೆ ಮಾಡಬ್ಯಾಡ; ಏನಾದರೂ ಕವಲು ಕೊಡು!"

ಮತ್ತೆ ಮೊದಲಿನಂತೆಯೆ! ಯಾವ ಕವಲೂ ದೊರೆಯಲಿಲ್ಲ ಪಂಚ-ನೊಬ್ಬ ಹೇಳಿದ:

"ಹನುಮಪ್ಪಾ, ಇದು ಕಲಿಯುಗಾ ಐತಿ, ಗೊತ್ತೈತಿ ಇಲ್ಲೊ? ಇಂತಾದೆಲ್ಲಾ ಹ್ಯಾಂಗ ನಡದೀತೋ ಹುಚ್ಚಪ್ಪಾ!"

ಹನುಮಪ್ಪನ ಮುಖ ಕೆಂಪಗಾಯಿತು. ಕಣ್ಣುಗಳು ಮಿಂಚಿದುವು. ಮೈಯೆಲ್ಲ ಕಂಪಿಸಿತು. ಮತ್ತೆ ಕೈಯೆತ್ತಿ ಕೂಗಿಕೊಂಡ:

"ತಾಯೀ, ನಿನ್ನ ಮಗಾ ಎಂದೂ ಸುಳ್ಳಾಡಿಲ್ಲ ನನ್ನ ಮೊಮ್ಮಗ್ಗ ಹೆಣ್ಣು ಸಿಗಲಿ, ಬಿಡಲಿ! ನನ್ನ ಸುಳ್ಳುಗಾರಾ ಅಂತ ಜನಾ ಆಡಿಕೊಳ್ಳೂ ಹಾಂಗ ಮಾಡಬ್ಯಾಡ ನನ್ನ ಗುಡದವ್ವಾ!"

ಗುಡ್ಡದ ತುದಿಯಲ್ಲಿ ಒಮ್ಮೆಲೆ ಗುಡುಗಿನ ಗರ್ಜನೆ ಕೇಳಿಸಿತು. ಮುಂಗಾರಿನ ಕೋಲ್ಮಿಂಚು ಸುಳಿದಂತಾಗಿ, ನಿಂತವರೆಲ್ಲರ ಕಂಗಳನ್ನು ಕುಕ್ಕಿ-

ಸಿತು. ಇದ್ದಾಡಿದ್ದ ಹಾಗೆಯೇ ದೊಡ್ಡದೊಂದು ಬಂಡೆಗಲ್ಲು, ಗುಡ್ಡದ ತುದಿ-ಯಿಂದ ಗಡಗಡನೆ ಉರುಳಿಕೊಂಡು ಬಂದು, ಹಿರಿಯ ಪಂಚನ ಬಳಿಯಲ್ಲಿ ನಿಂತುಕೊಂಡಿತು

ಪಂಚರಿಗೆಲ್ಲ ಭೀತಿ-ಆಶ್ಚರ್ಯ. ಗೌರವ್ವನ ಎದೆ ದಡದಡಿಸಿತು. ತಲೆ ಕೆಳಗಾಯಿತು. ಸಂಕಪ್ಪ ಯಾವುದೂ ತಿಳಿಯದೆ ಮಂಕನಂತೆ ನಿಂತು-ಬಿಟ್ಟಿದ್ದ ಹನುಮಪ್ಪ ಉದ್ದಕ್ಕೆ ನೆಲದಮೇಲೆ ಪೊಡವಟ್ಟು ಕಣ್ಣೀರನ್ನು ಕರೆಯುತ್ತಿದ್ದ. ಹಿರಿಯ ಪಂಚ ಓಡಿಬಂದು ಹನಮಪ್ಪನ ಕೈಹಿಡಿದು ಮೇಲಕ್ಕೆಬ್ಬಿಸಿದ.

ಹನುಮಪ್ಪನ ಮಾತು ಸತ್ಯವೆಂದು ಊರೆಲ್ಲ ಒಪ್ಪಿಕೊಂಡಿತು. ಪಂಚರು ಹನುಮಪ್ಪನಂತೆಯೇ ತೀರ್ಮಾನ ಕೊಟ್ಟರ; ಇಷ್ಟೇ ಅಲ್ಲ, ಊರಜನರೆಲ್ಲ ಒಂದಾಗಿ ನಿಂತು ಮಾದೇವಿಯನ್ನು ಚಿಕ್ಕೆಲ್ಲನಿಗೆ ಕೊಡಿಸಿ ವೈಭವದಿಂದ ಮದುವೆ ಮಾಡಿದರು.

ಅಂದು ಸಾಕ್ಷಿನುಡಿದ ಕಲ್ಲು, ಇದುವರೆಗೂ ಈ ಕತೆಯನ್ನು ಹೇಳುತ್ತ ಹಾಗೆಯೇ ನಿಂತುಕೊಂಡಿದೆ. ಅದನ್ನು ನೋಡಲು ಬಯಸುವವರು, ಬೇಕಿದ್ದರೆ ನನ್ನನ್ನು ಕಂಡು ವಿಶೇಷ ಸಂಗತಿ ತಿಳಿದುಕೊಳ್ಳಬಹುದು ನಮಸ್ತೇ !

# ಸೀಮೆಯ ಕಲ್ಲು

ವೀರನಗೌಡ ಬಹುದಿನಗಳಿಂದಲೂ ತಮ್ಮ ಹಳ್ಳಿಗೆ ಬರಲು ನನನ್ನು ಕರೆಯುತ್ತಿದ್ದ. ಹಳ್ಳಿ ನನಗೆ ಅಪ್ರೀತಿಯ ವಿಷಯವೇನೂ ಅಲ್ಲ; ಏಕೆಂದರೆ ನಾನೂ ಹಳ್ಳಿಯಲ್ಲಿ ಹುಟ್ಟಿ ಬೆಳೆದವನು. ಹಳ್ಳಿಯ ಸೊಗಸು-ಸೊಬಗುಗಳು ಎಂತಹವೆಂಬುದನ್ನು ಎಳೆಯತನದಲ್ಲಿ ಕಂಡುಂಡವನು. ಹಳ್ಳಿಗರ ಸೌಹಾರ್ದ-ಮಯ ಸಾಮಾಜಿಕ ಜೀವನ, ಕಟ್ಟು-ನಿಟ್ಟುಗಳ ಕೃತ್ರಿಮತೆಯಿಲ್ಲದ ಸರಲ ಸಹಜ ಸ್ವಭಾವ—ಇವುಗಳ ಸವಿಯನ್ನು ಅನುಭವಿಸಿದವನು. ಉಸಿರುಗಟ್ಟಿಸುವಂತಿರುವ ಇಂದಿನ ನನ್ನ ಪಟ್ಟಣದ ಜೀವನದಲ್ಲಿ, ಹಳ್ಳಿಯಲ್ಲಿ ಕಳೆದ ಚಿಕ್ಕತನದ ಸಿಹಿನೆನಪುಗಳು, ಸುಖಸ್ವಪ್ನಗಳಂತೆ ಆಗಾಗ ಮನದ ಪಟದ ಮೇಲೆ ಮೂಡಿ ಮೂಡಿ ಹೋಗುತ್ತಿರುತ್ತವೆ. ಆದುದರಿಂದಲೇ ನನಗೆ ಹಳ್ಳಿಗೆ ಹೋಗಬೇಕೆಂದು ಆಗಾಗ ಎನಿಸುವುದು; ಆದರೆ ಹೊಟ್ಟೆಯ ಹೋರಾಟ ಪಟ್ಟಣದಲ್ಲಿ ನನ್ನ ಕಾಲುಗಳನ್ನು ಕಟ್ಟಿಹಾಕಿರುವುದು.

ವೀರನಗೌಡನ ಒಲವಿನ ಔತಣವನ್ನು—ಎರಡು-ಮೂರು ಸಲ—ಅನಿವಾರ್ಯವಾಗಿ ನಿರಾಕರಿಸಬೇಕಾಗಿ ಬಂದಿತು. ಆಗಿನ ಆ ಗೆಳೆಯನ ನೊಂದ ಹೃದಯದ ಅನುಭಾವ, ನನ್ನ ಹೃದಯವನ್ನು ಅಲುಕಿಸಿತ್ತು. ಈ ಸಲ ಬಂದೇ-ತೀರಬೇಕೆಂದು ಗೌಡ ಹಟವನ್ನೇ ಹಿಡಿದ. ಗೆಳೆಯನ ಮನಸ್ಸನ್ನು ಮತ್ತೆ ಮತ್ತೆ ನೋಯಿಸಬಾರದೆಂದು ನಿರ್ಣಯಿಸಿ, ಆರು ದಿನಗಳ ರಜೆ ಪಡೆದುಕೊಂಡು ವೀರನಗೌಡನ ಹಳ್ಳಿಗೆ ಹೊರಟುಬಿಟ್ಟೆ.

ಹಳ್ಳಿಯ ಗೌಡರ ಮನೆಯಲ್ಲಿ ನಾನು ಅತಿಥಿ. ಮನೆಗೆ ಬಂದವರೆಲ್ಲ ಬೆರಗುಗಣ್ಣುಗಳಿಂದ ನನ್ನನ್ನು ನೋಡುತ್ತ, ಗೌಡರ ಮಗನ ಗೆಳೆಯನೆಂದು ಅರಿತುಕೊಂಡು, ಸಹಜವಾದ ಆದರ-ಪ್ರೀತಿಗಳನ್ನು ಸಲ್ಲಿಸುತ್ತಿದ್ದರು. ವೀರನಗೌಡನ ತಂದೆ—ಹಿರಿಯಗೌಡರು ಹೆಚ್ಚಿಗೆ ಕಲಿತವರಲ್ಲವಾದರೂ, ಹುಟ್ಟಿ ಬೆಳೆದ ದೊಡ್ಡ ಮನೆತನದ ಪರಂಪರೆ ಅವರ ಮನಸ್ಸು-ಹೃದಯಗಳನ್ನು ಅರಳಿಸಿತ್ತು. ನಾನು ತಮ್ಮ ಮನೆಗೆ ಬಂದುದು ಅವರಿಗೆ ತುಂಬ

ಸಂಕೋಚವನ್ನು ಉಂಟುಮಾಡಿತ್ತು. ಆದುದರಿಂದಲೇ ನಾನು ಎಷ್ಟು ತಿಂದರೂ ಕಡಮೆ; ಎಷ್ಟು ಉಂಡರೂ ಕಡಮೆ. ನನಗೆ ಯಾವುದರ ಕೊರತೆಯೆನಿಸಿತೊ— ಎಂದು ಯಾವಾಗಲೂ ನನ್ನ ಮುಖವನ್ನು ಅವರು ನಿಟ್ಟಿಸುತ್ತಿದ್ದರು. ವೀರನಗೌಡನಿಗೆ ಅವರಿಂದ ತಂದೆಯು ಪ್ರೀತಿಯೊಂದೇ ಸಲ್ಲುತ್ತಿದ್ದರೆ, ನನಗೆ ಅಂತಹ ಪ್ರೀತಿಯೊಂದಿಗೆ ಆತಿಥ್ಯದ ಮಾನ-ಸನ್ಮಾನಗಳೂ ಸಲ್ಲುತ್ತಿದ್ದುವು.

ಅಕ್ಕನ ಮನೆಯಿಂದ ತವರ ಮನೆಗೆ ಬಂದಿದ್ದ— ವೀರನಗೌಡನ ತಂಗಿ ಸಿಂಗಾರವ್ವ, ತಂಗಿಯಿಲ್ಲದಿರುವ ನನ್ನ ಕೊರತೆಯನ್ನು ಕಳೆದುಬಿಟ್ಟಳು. ಕಥೆ-ಕಾದಂಬರಿಗಳನ್ನೋದಿ, ನಾಟಕ-ಚಲಚ್ಚಿತ್ರಗಳನ್ನು ನೋಡಿ ಹೆಣ್ಣಿನ ಪ್ರೀತಿಯೆಂದರೆ ಶೃಂಗಾರಸಂಬಂಧವಾದುದೇ ಎಂದು ನಂಬಿಬಿಟ್ಟಿದ್ದ ನನ್ನನ್ನು— ಸಿಂಗಾರವ್ವನ ತಂಗಿತನದ ಪ್ರೀತಿ ಚೆನ್ನಾಗಿ ಕಣ್ಣು ತೆರೆಯಿಸಿತು. ವೀರನ-ಗೌಡನ ಹೆಂಡತಿ ಚಿನ್ನವ್ವನ ಮನೆತನದ ಮಾನ ಸತ್ಕಾರವಂತೂ ನನ್ನನ್ನು ಬೆರಗುಗೊಳಿಸಿಬಿಟ್ಟಿತು. ನೋಡಿದರೆ ನನ್ನ ಜಾತಿ ಬೇರೆ; ವೀರನಗೌಡನ ಜಾತಿ ಬೇರೆ. ಆದರೆ ಅವರೆಲ್ಲರ ಸ್ನೇಹ ಪ್ರೀತಿಗಳ ಪ್ರವಾಹ, ನನ್ನ ಜಾತಿಯ ನೆನಪನ್ನೇ ಕೊಚ್ಚಿಕೊಂಡು ಹೋಗಿದ್ದಿತು.

ಗೌಡರ ಹಳ್ಳಿಯಿಂದ ಮೂಡಣಕ್ಕೆ— ಎರಡು ಮೈಲುಗಳ ಅಂತರದ ಮೇಲೆ— ಇನ್ನೊಂದು ಕಿರುವಳ್ಳಿಯಿದೆ. ಅಲ್ಲಿ ಈ ಗೌಡರದೊಂದು ತೋಟವಿದೆ. ದೊಡ್ಡದಾದ ತೋಟ ಅದೊಂದೇ ತೋಟದಲ್ಲಿ ಆರು ಎತ್ತುಗಳೂ ಆರೇಳು ಜನ ಆಳುಗಳೂ ದುಡಿಯುತ್ತಾರೆ. ಕಬ್ಬು-ಬಾಳೆಗಳು ಮುಖ್ಯ ಬೆಳೆ. ಹೌಸಿಗಾಗಿ ಅಪರೂಪದ ಹಣ್ಣಿನ ಗಿಡಗಳನ್ನೂ, ಹೂವಿನ ಗಿಡಗಳನ್ನೂ ಹಚ್ಚಿಸಿದ್ದಾರೆ. ಈ ತೋಟವನ್ನು ನೋಡಲಿಕ್ಕೆಂದು ಒಂದು ದಿನ ಬೆಳಗಿನಲ್ಲಿ, ನಾವಿಬ್ಬರೂ ಹೋದೆವು.

'ಬಂಡಿ ಹೂಡಿಸಿ ಕುಳಿತುಕೊಂಡು ಹೋಗಿರಿ' ಎಂದರು ಹಿರಿಯ-ಗೌಡರು 'ಬೇಡ ನಡೆಯುತ್ತಲೇ ಹೋಗೋಣ' ಎಂದು ನಾನೆಂದೆ. ವೀರನ-ಗೌಡನೂ ನನ್ನ ಮಾತನ್ನು ಒಪ್ಪಿಕೊಂಡ. ನಡೆಯುತ್ತಲೇ ಹೊರಟೆವು. ಓಲೇಕಾರನೊಬ್ಬ ನಮಗೆ ದಾರಿ ತೋರಿಸುವವನಂತೆ ಮುಂದೆ ಮುಂದೆ ನಡೆದಿದ್ದ.

ಸುಮಾರು ಒಂದು ಮೈಲು ದಾರಿಯನ್ನು ಸಾಗಿರಬಹುದು. ಮುಂದೆ ದಾರಿಯ ಎಡಪಕ್ಕದಲ್ಲಿ, ದಪ್ಪಗಿನ ಹಾಸುಗಲ್ಲೊಂದು ಬಿದ್ದುದ್ದನ್ನು ಕಂಡೆ. ಏನೋ ಒಂದು ಕಲ್ಲು ಇರಬಹುದೆಂದು ನಾನು ದುರ್ಲಕ್ಷಿಸಿ ಹಾಗೆಯೆ ಮುಂದುವರಿಯಬಹುದಾಗಿತ್ತು; ಆದರೆ ನಮ್ಮ ಮುಂದೆ ಮುಂದೆ ನಡೆದಿದ್ದ ಓಲೇಕಾರ, ಬಗ್ಗಿ ದಾರಿಯಲ್ಲಿ ಬಿದ್ದ ಹಿಡಿಗಲ್ಲೊಂದನ್ನು ಕೈಯಲ್ಲಿ ತೆಗೆದುಕೊಂಡು, ಆ ಹಾಸುಗಲ್ಲ ಬಳಿಗೆ ಹೋದ; 'ಥೂ' ಎಂದು ಅದರ ಮೇಲೆ ಉಗುಳಿ, ಕೈಯ ಹಿಡಿಗಲ್ಲನ್ನು ಹಾಸುಗಲ್ಲಿಗೆ ಎಸೆದು ಮುಂದೆ ಹೊರಟ. ಓಲೇಕಾರನ ಈ ರೀತಿ ನನ್ನನ್ನು ಕುತೂಹಲಿಯನ್ನಾಗಿ ಮಾಡಿತು. ನಾನು ನಿಂತು ಆ ಹಾಸು–ಗಲ್ಲನ್ನು ನಿಟ್ಟಿಸಿ ನೋಡತೊಡಗಿದೆ. ಅದರ ಬಳಿಯಲ್ಲಿ ಹಿಡಿಗಲ್ಲುಗಳು ರಾಶಿ-ರಾಶಿಯಾಗಿ ಬಿದ್ದಿವೆ. ನಾನು ಕೆಣಕಿದ ಮನದವನಾಗಿ ಕೇಳಿದೆ:

"ಇದೇನಪಾ, ಈ ಕಲ್ಲು ಗೌಡಾ!"

ವೀರನಗೌಡ ಸ್ವಾಭಾವಿಕ ಧ್ವನಿಯಲ್ಲಿ ಹೇಳಿದ:

"ಓ! ಇದಽ? ಇದು ನಮ್ಮೂರ ಸೀಮಿಯ ಕಲ್ಲು. ಇಲ್ಲಿಂದ ಮುಂದಿನ ಹೊಲಗಳೆಲ್ಲಾ ಮುಂದಿನ ಕಿರುವಳ್ಳಿಗೆ ಸಂಬಂಧಿಸಿದ್ದೂ!"

"ಸೀಮಿಯ ಕಲ್ಲು ಸರಿಹೋಯ್ತು; ಇಲ್ಲಿ ಹೀಂಗ ಹಿಡಿಗಲ್ಲುಗಳ ರಾಶಿ ಯಾಕ ಬಿದ್ದಽದ! ಇದೇ ಈಗ ನಿಮ್ಮ ವಾಲೀಕಾರ, ಈ ಹಾಸುಗಲ್ಲ ಮ್ಯಾಲೆ ಉಗುಳಿ, ತಾನೂ ಒಂದು ಹಿಡಿಗಲ್ಲು ಎಸೆದು ಮುಂದೆ ಸಾಗಿದನಲ್ಲಾ! ಇದೇನು ರೀತಿಯಿದು?"

"ಏನೋಽಪ್ಪಾ! ಹಿಂದಿನಿಂದಲೂ ಏನೋ ಒಂದು ರೂಢಿ ನಡಕೊಂಡು ಬಂದಽದ. ಈ ಹಾದಿಯಲ್ಲಿ ಹೋಗಿ–ಬರುವವರೆಲ್ಲಾ — ಪ್ರತಿ ಸಲಕ್ಕೊ— ಈ ಕಲ್ಲ ಮ್ಯಾಲೆ ಉಗುಳಿ, ಒಂದೊಂದು ಹಿಡಿಗಲ್ಲು ಎಸೆದು ಹೋಗತಿರತಾರ. ಚಿಕ್ಕತನದಲ್ಲಿ ನಾನು ಕೂಡಾ ಹೀಂಗೆಲ್ಲಾ ಮಾಡತಿದ್ದೆ. ಏನೋ ಒಂದು ಹಳ್ಳಿಗರ ಪದ್ಧತಿ!"

"ಅದಾಯ್ತು ಗೌಡಾ! ಹೀಂಗ ಪದ್ಧತಿ ಬೀಳಲಿಕ್ಕೆ ಏನಾದರೂ ಒಂದು ವಿಶೇಷ ಕಾರಣ ಇರಬೇಕಲ್ಲ! ಆ ಕಾರಣ ನಿನಗೇನಾದರೂ ಗೊತ್ತದಽ ಏನು?"

"ನನಗೇನೂ ಗೊತ್ತಿಲ್ಲ ಬಿಡು ! ಎಲ್ಲಾರೂ ಉಗುಳಿ ಕಲ್ಲು ಒಗೀ-ತಿದ್ದರಂತ ನಾನೂ ಉಗುಳತ್ತಿದ್ದೆ, ಕಲ್ಲು ಒಗೆದು ಮುಂಪಕ್ಕೆ ಹೋಗತ್ತಿದ್ದೆ !"

ನನ್ನಲ್ಲಿ ತಲೆದೋರಿದ್ದ ಕುತೂಹಲ ನನ್ನನ್ನು ಮುಂದೆ ಬಿಡಲಿಲ್ಲ. ಆ ಹಾಸುಗಲ್ಲ ಹತ್ತಿರ ಹೋಗಿ ಅದನ್ನು ನೋಡಲುತೊಡಗಿದೆ. ಕಾಡುಗಲ್ಲು; ಆದರೂ ಮೇಲ್‌ಬದಿಯಲ್ಲಿ ಒಂದು ಚೌಕನ್ನು ಕಡೆದಿದ್ದು, ಅದರ ನಡುವೆ ಛಿನ್ನಭಿನ್ನವಾದ ಮನುಷ್ಯಾಕೃತಿಯೊಂದು ಮಸುಕುಮಸುಕಾಗಿ ಕಾಣುತ್ತಿತ್ತು. ಜನರು ಎಸೆದ ಕಲ್ಲಿನ ಪೆಟ್ಟಿಗೆ ಆ ಮನುಷ್ಯಾಕೃತಿ ಸವೆಯುತ್ತ ಹೊರಟಿದ್ದಿತು. ನನಗೆ ತುಂಬ ಆಶ್ಚರ್ಯ. ದಪ್ಪಗಿನ ಕಾಡುಗಲ್ಲು....ಅದರ ಮೇಲೆ ಮಾನವಾ-ಕೃತಿ....ಹೋಗು ಬರುವ ಜನ ಉಗುಳುವರು....ಕಲ್ಲೆಸೆಯುವರು .......ಇದರಲ್ಲಿ ಏನಾದರೂ ರಹಸ್ಯವಿರಬೇಕೆಂದು ನನಗೆನಿಸಿತು. ಹಲವು ಬಗೆಯ ಪ್ರಶ್ನೆಗಳನ್ನು ಹಾಕಿದರೂ ವೀರನಗೌಡನಿಂದ ಒಂದಕ್ಕೂ ಸಮಾಧಾನಕರವಾದ ಉತ್ತರ ಸಿಕ್ಕಲಿಲ್ಲ. ನಾನು ಅತೃಪ್ತಭಾವದವನಾಗಿಯೆ ಮುಂದೆ ಹೆಜ್ಜೆ ಇಟ್ಟೆ. ದಾರಿ-ಯುದ್ದಕ್ಕೂ ಗೌಡ ಏನೇನೋ ಮಾತನಾಡುತ್ತ ನಡೆದಿದ್ದ; ಆದರೆ ಆ ಸೀಮೆಯ ಕಲ್ಲು ನನ್ನನ್ನು ಕೆಲವು ಹೊತ್ತು ಕಿವಿಯಿದ್ದ ಕಿವುಡನನ್ನಾಗಿಸಿದ್ದಿತು.

ತೋಟವನ್ನು ತಲ್ಪಿದೆವು. ಕಲ್ಲು-ಗಾರೆಗಳಿಂದ ಕಟ್ಟಿದ್ದ ಆ ಭವ್ಯ ವಾದ ಏತದ ಬಾವಿ, ಏತದ ಮೇಲೆ ಮೊಟ್ಟೆಗೆ ಹೂಡಿದ್ದ ಗಟ್ಟಿಮುಟ್ಟಾದ ಎತ್ತುಗಳ ಜೋಡಿ, ಏತದ ಗಾಲಿಯ ಮಧುರ-ಕರ್ಕಶವಾದ ಕಿರುಚಾಟ, ತೋಟದ ಪಯಿರುಗಳ ವೈಸಿರಿ, ಅರಳಿದ ಹೂಗಳ ನಗೆ— ಇವೆಲ್ಲ ಕೂಡಿ ನನ್ನ ಮನಸ್ಸಿನೊಳಗಿಂದ ಸೀಮೆಯ ಕಲ್ಲಿನ ವಿಷಯವನ್ನು ಕೆಲವು ಹೊತ್ತು ಪೂರ್ಣವಾಗಿ ಹೊರಗೆ ತಳ್ಳಿಬಿಟ್ಟುವು.

ತೋಟದಲ್ಲೆಲ್ಲ ಸುತ್ತಾಡಿ ಬಂದೆವು. ಬರುವುದರಲ್ಲಿಯೇ ಆಳೊಬ್ಬ, ಬಾವಿಯ ಬಳಿಯಲ್ಲಿ ಕಟ್ಟಿದ್ದ ಹೊಳೆಸಾಲ ಆಕಳನ್ನು ಹಿಂಡಿ ಮುಗಿಸಿದ್ದ; ಆಗ ತಾನೆ ಹಿಂಡಿದ ನೊರೆಹಾಲಿನ ತಂಬಿಗೆಯನ್ನು ನಮ್ಮೆದುರು ತಂದಿಟ್ಟ; ವೀರನಗೌಡ, 'ಕುಡಿ, ಕುಡಿ !' ಎಂದು ಒತ್ತಾಯಮಾಡಿ, ಮೂರು ಲೋಟಾ ಹಾಲನ್ನು ನನಗೆ ಕುಡಿಸಿದ; ತಾನೂ ಸಾಕಷ್ಟು ಕುಡಿದ. ನಗರದಲ್ಲಿರುವ ನಮಗೆ ಅಂತಹ ನೊರೆಹಾಲಿನ ಸುಖವು ಹೇಗೆ ಸಿಕ್ಕಬೇಕು ?

ಬಿಸಿಲು ಏರುವುದರಲ್ಲಿಯೆ ಮನೆಯ ಕಡೆಗೆ ಹೊರಟೆವು. ದಾರಿಯಲ್ಲಿ ಮತ್ತೆ ಸೀಮೆಯ ಕಲ್ಲನ್ನು ನೋಡಿದೆವು. ಜೊತೆಯಲ್ಲಿದ್ದ ಓಲೆಕಾರ, ಬರುವಾಗ ಕೂಡ ಮುನ್ನಿನಂತೆ ಅದರ ಮೇಲೆ ಉಗುಳಿ, ಹಿಡಿಗಲ್ಲನ್ನು ಅಪ್ಪಳಿಸಿ ಹೊರಟ. ಮತ್ತೆ ಆ ಕಲ್ಲು ನನ್ನ ಮನದಲ್ಲಿ ಮನೆಕಟ್ಟಿ ಕುಳಿತಿತು. ನಮ್ಮ ನಾಡಿನಲ್ಲಿ ಇರುವ ಹಲವು ಮಾತನಾಡುವ ಕಲ್ಲುಗಳಂತೆ ಇದೂ ಇರಬಹುದೆಂದು ಭಾವಿಸಿದೆ. ಅದೇ ಭಾವನೆಯಲ್ಲಿಯೆ ಜೊತೆಯವರನ್ನು ಕೂಡಿಕೊಂಡು ನಡೆದು, ಮನೆಯನ್ನು ತಲ್ಪಿದೆ.

ಸ್ನಾನ-ಊಟಗಳು ಮುಗಿದುವು. ವಿಶ್ರಾಂತಿಗಾಗಿ ನಾವೆಲ್ಲ ಮೊಗಸಾಲೆಯಲ್ಲಿ ಕುಳಿತುಕೊಂಡು ಅಡಿಕೆಲೆ ಮೆಲ್ಲುತ್ತಿದ್ದೆವು. ಆಗ ವೀರನಗೌಡ ತಂದೆ-ಯವರನ್ನು ಕುರಿತು ಹೇಳಿದ:

"ಅಪ್ಪಾಜಿ, ನಮ್ಮ ಆ ಸೀಮೀಕಲ್ಲು ಇಲ್ಲs ? ಅದು ಈತಗ ಒಂದು ಆಶ್ಚರ್ಯದ ವಿಷಯನೇ ಆಗಿ ಕೂತsದ. ಹಳ್ಳೀ ಊರೊಳಗ ಇಂಥಾವೆಲ್ಲಾ ಹುಚ್ಚುಚ್ಚಾರ ಎಷ್ಟೆಷ್ಟೋ ಇರತಾವಪಾ— ಅಂದರೂ, ಇವನಿಗೇನೂ ಸಮಾ-ಧಾನವಾಗಲಿಲ್ಲ."

ನನಗೆ ಯೋಗ್ಯ ಸಂದರ್ಭ ಸಿಕ್ಕಂತಾಯಿತು. ಒಮ್ಮೆಲೇ ಕೇಳಿದೆ:

"ಹೌದು ಗೌಡರs ನೀವು ಹಿರಿಯರು. ನಿಮಗ ಆ ಕಲ್ಲಿನ ವಿಷಯ ಏನಾದರೂ ಗೊತ್ತು ಇರಲೇಬೇಕು. ನಿಮ್ಮೂರಿನ ಸೀಮೀಕಲ್ಲಿನ ಮ್ಯಾಲೆ ಹಾದಿಕಾರರೆಲ್ಲಾ ಉಗುಳಿ, ಕಲ್ಲು ಎಸೆದು ಯಾಕ ಹೋಗತಾರ? ಅದರ ಮ್ಯಾಲೆ ಒಂದು ಮನುಷ್ಯನ ಆಕೃತಿ ಅದs ಅಲ್ಲಾ. ಅದು ಯಾರದಾದರೂ ನೆನಪಿಗಾಗಿ ಮಾಡಿದ್ದಿರಬಹುದೂ— ಅಂತ ನನಗ ಅನಿಸತsದ!"

ಹಿರಿಯಗೌಡರು ಹೇಳತೊಡಗಿದರು:

"ಹೌದು ಹೌದು! ನಿಮ್ಮ ಮಾತು ಖರೇ ಅದ. ಅದರ ಮ್ಯಾಲೆ ಇರುವ ಮನಸ್ಯಾನ ಚಿತ್ರ, ನಮ್ಮ ಮನೆತನಕ್ಕ ಹೊಂದಿದ ಹಿಂದಿನ ಹಿರಿ-ಯರ ಪೈಕಿ ಒಬ್ಬ ನದsತ! ಏನೋ ಒಂದು ಕೆಟ್ಟ ಕೆಲಸಾ ಮಾಡಿದನಂತ; ಆ ತಪ್ಪಿಗಾಗಿ ಆತ ಸೂರ್ಯ-ಚಂದ್ರ ಇರೋತನಕಾ ಶಿಕ್ಷಾ ಅನುಭವಿಸ-ತಿರಬೇಕಂತ, ಆ ಕಲ್ಲಮ್ಯಾಲ ಅವನ ಗೊಂಬೀ ತಗದು ದಾರೀ ಮ್ಯಾಲೆ

ಇರಿಸ್ಯಾರಂತ. ದಾರೀ ಹಿಡಿದು ಹೋಗು–ಬರುವವರೆಲ್ಲಾ ಆ ಗೊಂಬೀ ವ್ಯಾಳೆ ಉಗುಳಿ, ಕಲ್ಲೊಂದು ಒಗೆದು ಹೋಗಬೇಕಂತ– ಹಿಂದಿನ ಹಿರಿಯರು ಅಂದೇ ಕಟ್ಲೆ ಮಾಡಿಬಿಟ್ಟಾರಂತ. ಅದೇ ಇಂದಿನ ವರೆಗೂ ನಡಕೊಂಡು ಬಂದsದೇನ್ರಿ !"

ನನ್ನ ಅನುಮಾನ ಸರಿಯಾಗಿ ಪರಿಣಮಿಸಿದುದಕ್ಕಾಗಿ, ನನಗೆ ಸ್ವಲ್ಪ ಸಮಾಧಾನವಾಯಿತು. ಆದರೂ ಆ ಕಲ್ಲಿನ ಕತೆಯನ್ನು ಪೂರ್ಣವಾಗಿ ತಿಳಿದುಕೊಳ್ಳಬೇಕೆಂಬ ಕುತೂಹಲ ನನ್ನಲ್ಲಿ ಒಂದೇಸವನೆ ಕುಣಿದಾಡಲು ತೊಡಗಿತು. ಅದೇ ನನ್ನಿಂದ ಮಾತನಾಡಿಸಿತು :

"ಸರಿ ! ಹೀಂಗೇನಾದರೂ ಇರಲಿಕ್ಕೇ ಬೇಕಂತ ನನಗ ತುಂಬಾ ಅನಿಸಿತ್ತು. ಇಂದಿನ ಕಲಿತ ಜನರು ನಾವು, ಇಂಥಾ ಪರಂಪರೆಗಳಿಗೆ 'ಹುಚ್ಚುಚ್ಚಾರ' 'ಹುಂಬತನ' ಅಂತ ಅಂತೀವೇನೋ ನಿಜ; ಆದರ ಈ ಹುಚ್ಚುಚ್ಚಾರ–ಹುಂಬತನಗಳ ನೆಲೆಯನ್ನು ಕಂಡುಹಿಡಿದರೆ, ಅದೊಂದು ದೊಡ್ಡ ತತ್ತ್ವದ ಮ್ಯಾಲೆ ನಿಂತುಕೊಂಡsದ ಅಂಬೂದು ಸ್ಪಷ್ಟವಾಗಿ ಕಾಣ-ತsದ. ಆಯ್ತು ! ಆ ನಿಮ್ಮ ಹಿರಿಯ ಯಾವ ತಪ್ಪು ಮಾಡಿದನಂತ ಇಂಥಾ ಉಗ್ರಶಿಕ್ಷಾ ಅನುಭವಿಸಬೇಕಾತೂ— ಅಂಬೋದು ನಿಮಗೇನಾರೇ ಗೊತ್ತsದs ಏನು ?"

ಹಿರಿಯ ಗೌಡರು ಹೇಳಲಾರಂಭಿಸಿದರು :

"ನನಗೇನೂ ಆ ಮಾತು ಅಷ್ಟೊಂದು ನಿಚ್ಚಳಾಗಿ ಗೊತ್ತಿಲ್ಲ. ನಾನು ಚಿಕ್ಕಂವ ಇದ್ದಾಗ, ನಮ್ಮ ತಂದೆಯವರು ಹೇಳಿದ್ದ ಮಾತಿನ ನೆನಪಿನಿಂದ, ನಿಮಗೀಗ ಈ ಮಾತನ್ನು ನಾನು ಹೇಳಿದೆ. ನಾನು ಓದು–ಬರೀ ಹೆಚ್ಚಾಗಿ ಕಲೀಲಿಲ್ಲ. ಇದ್ದ ಕಾಗದ–ಪತ್ರಾ ಓದಲಿಕ್ಕೂ ನನಗ ಬರೂದಿಲ್ಲ. ಈ ಸೀಮೀ ಕಲ್ಲಿನ ಸಂಗ್ತೀನೆಲ್ಲಾ ಬರೆದದ್ದೊಂದು ಕಾಗದ ನಮ್ಮ ಮನ್ಯಾಗ ಅದ. ಹಿರಿ-ಹಿರಿಯರ ಕಾಲದಿಂದ ಆ ಕಾಗದಾನ ನಾವು ಕಾಯ್ದುಕೊಂಡು ಬಂದೀವಿ. ಆದರೇನು, ಕುರುಡನ ಕೈಯಾಗಿನ ಕನಡಿ ಇದ್ದಾಂಗ ! ನಮಗೇನೂ ಅದನ್ನ ಓದಲಿಕ್ಕೆ ಬರೂದಿಲ್ಲ ಬಿಡೂದಿಲ್ಲ !"

ನನ್ನ ಆತುರ ಇನ್ನಷ್ಟು ಕೆರಳಿ ನಿಂತಿತು. ತಟ್ಟನೆ ಕೇಳಿದೆ :

"ಎಲ್ಲಿ ಅದ ಆ ಕಾಗದ ?"

ಗೌಡರು ನುಡಿದರು :

"ಯಾಕ, ಈಗs ಬೇಕೇನು ? ಅದರ ಮ್ಯಾಲೆ ಬರದದ್ದನ್ನೆಲ್ಲಾ ಹಳೇ ಲಿಪಿಯೊಳಗ ಬರದಾರ. ನಿಮಗ ಓದಲಿಕ್ಕೆ ಬಂದೀತೇನು ?"

"ಹಳೆಯ ಲಿಪಿ ಓದಲಿಕ್ಕೆ ಬರತsದ ನನಗ. ಈಗ ತ್ರಾಸ ಇಲ್ಲದೆ ಬೇಗನೆ ಕೈಗೆ ಬರೂಹಾಂಗಿದ್ದರ, ನೋಡಿ ಹುಡುಕಿ ಕೊಡತೀರೇನು, ಆ ಕಾಗದಾನ ?"

ಹಿರಿಯಗೌಡರು ತಟ್ಟನೆ ಮೇಲಕ್ಕೆದ್ದರು. ನಾಗವಂದಿಗೆಯ ಮೇಲಿದ್ದ ಹಳೆಯ ಕಾಗದಗಳ ಗಂಟೊಂದನ್ನು ತೆಗೆದುಕೊಂಡು ಬಂದು, ಅದನ್ನು ಬಿಚ್ಚಿ ನೋಡಿ, ತಮಗೆ ಗೊತ್ತಿದ್ದ ಹಳೆಯ ಕರಡುಕಾಗದವನ್ನು ಹುಡುಕಿ ತೆಗೆದು, ನನ್ನ ಕೈಯಲ್ಲಿ ಕೊಟ್ಟರು. ವೀರನಗೌಡನೂ ಬೆರಗುಗಣ್ಣುಗಳಿಂದ ಅದನ್ನು ನೋಡತೊಡಗಿದ. ನಾನು ಆತುರದಿಂದ ಮಡಿಕೆಯನ್ನು ಬಿಚ್ಚಿ ಕಾಗದವನ್ನು ನೋಡಿದೆ. ಸುಮಾರು ೧೭ ನೆಯ ಶತಮಾನದಲ್ಲಿ ಬಳಕೆಯಲ್ಲಿದ್ದ ಕನ್ನಡ ಲಿಪಿಯದು. ಓದಲಿಕ್ಕೆ ವಿಶೇಷ ಶ್ರಮವನ್ನೇನೂ ವಹಿಸಬೇಕಾಗಿರಲಿಲ್ಲ. ಬರೆದಿದ್ದ ಭಾಷೆ ಅಷ್ಟೊಂದು ಪರಿಶುದ್ಧವಾದುದಲ್ಲ. ಆ ಕಾಲದ ಹಳ್ಳಿಗರು ಬರೆಯುವ ಭಾಷೆ ಇದ್ದಂತೆ ಇತ್ತು. ನಾನು ನಿಧಾನವಾಗಿ ಓದಲಾರಂಭಿಸಿದೆ. ಬರೆದ ವಿಷಯ ಹೀಗೆ ಇತ್ತು :

"ಸಾಲಿವಾಹನ ಸಕವರುಸ X X X X ರಲ್ಲಿ ಗಟಿಸಿದ ಹಕೀಕತ್ತು ಇದು : ಹಿರಿಯೂರ ಗೌಂಡರ ಮನಿತನದಲ್ಲಿ ಅಣ್ಣ ಮಲ್ಲಿಗೊಂಡ; ತಮ್ಮ ಚಿಕ್ಕಗೊಂಡ. ಮಲ್ಲಿಗೊಂಡ ಧರ್ಮರಾಜ. ಯಾರಿಗೂ ಕೇಡಕು ಮಾಡುವವನಲ್ಲ; ಯಾರ ತಪ್ಪನೂ ಸೈಸುವವನಲ್ಲ. ಪಾಪ ಮಾಡಿದವಂಗೆ ಪ್ರಾಯಚಿತ್ತ ಕೊಡಲೇಬೇಕಂಬೋದು ಆ ಪರ್ಮಾತುಮನ ಬಿರುದು. ಪರರ ಹೆಣ್ಣನು ಪಾರ್ವತೀದೇವಿಯಂತೆ ಕಾಣುವ ಶರಣನವ ಊರಿಗೆ ಅರಸನಾದರೂ ಕೈಯಾಸೆ (ಲಂಚ) ಎಂಬುದನು ಕಂಡು ಕೇಳಿ ಅರಿಯ. ಸಜ್ಜನರಿಂಗೆ ಉಪಕಾರಿ; ದುರ್ಜನರಿಂಗೆ ಹೆಮ್ಮಾರಿ. ತಮ್ಮ ಚಿಕ್ಕಗೊಂಡ ಧುಡುಕ; ಪಟಿಂಗ ! ಇಪ್ಪತ್ತೆರಡು ವರ್ಸದ ಒಗರುಪ್ರಾಯ. ಗರಡಿಯಾಡಿದ ಜಟ್ಟಿಗ. ಹೆಣ್ಣುಗಳ ಕಡೆಗೆ ಹರಿದೋಡುವ ಕಾಮದ ಕಣ್ಣಿನವ ಮಾವಿನ ಮರದ

ಜೊತೆಯಲ್ಲಿ ಹುಟ್ಟಿ ಬೆಳೆವ ಮುಳ್ಳುಮರದಂತೆ, ಚಿಕ್ಕಗೊಂಡ ಮಲ್ಲಿಗೊಂಡಂಗೆ ತಮ್ಮನಾಗಿ ಹುಟ್ಟಿ ಬೆಳೆದಿದ್ದ.

....ಗೌಡರ ಹಿರಿಯ ಕಮತಿಗ ಕಲ್ಲಜ್ಜ. ಈತನ ಹಿರಿಯ ಮಗ ಜಕ್ಕಣ್ಣ. ಜಕ್ಕಣ್ಣನ ಹೆಂಡತಿ ಹೂವಮ್ಮ, ಹಳ್ಳಿಗೆ ಹೊಸತಾಗಿ ಬಂದವಳು. ಸಾವಿರ ಹೆಣ್ಣುಗಳಲ್ಲಿ ಎದ್ದು ತೋರುವಂಥಾ ಚೆಲುವಿ-ಚೆನ್ನಿ ಹೂವಮ್ಮ. ಯಾರ ಸೊಸೆಯಾದರೇನು? ಊರಿಗೆ ಬಂದವಳು ನೀರಿಗೆ ಬಾರದಿರುವಳೇ? ಒಂದು ಸಂಜೆಯ ಹೊಂಬಿಸಿಲಿನಲ್ಲಿ ಚಿಕ್ಕಗೊಂಡ ನೀರ ಹೊಳೆಯ ದಾರಿಯ ಮ್ಯಾಲೆ, ಹೂವಿನಂಥಾ ಹೂವಮ್ಮನನ್ನು ನೋಡಿದ. ಮನಸ್ಸನ್ನು ಅವಳಿಗೆ ಮಾರು ಗೊಟ್ಟ. ವಿರಾಟರಾಜನ ಪಟ್ಟಣದಲ್ಲಿ ದ್ರೌಪದಿಯನ್ನು ನೋಡಿದ ಕೀಚಕ ನಂತೆ ಅವನ ಪಾಡಾಯಿತು.

....ಒಂದೆರಡು ಸಲ ಅವಕಾಶ ಸಿಕ್ಕಾಗ ಧುಡುಕಿ ಚಿಕ್ಕಗೊಂಡ, ಹೂವಮ್ಮನ ವ್ಯಾಲೆ ಕೈಮಾಡಲಿಕ್ಕೆ ಹವಣಿಸಿದ. ಹೆಂಡತಿಯಿಂದ ಜಕ್ಕಂಗೆ ಈ ಸಂಗತಿ ಗೊತ್ತಾಯಿತು. ಜಕ್ಕ ತನ್ನ ತಂದೆಯ ಕಿವಿಗೆ ಈ ಮಾತನು ಮುಟ್ಟಿಸಿದ: 'ದೇವರಂತಾ ಮಲಿಗೊಂಡರ ಬೆನ್ನಲಿ ಬಂದವನೆಂತ ಕೈಕಾದಿ ದ್ದೇನೆ; ಇಲ್ಲವಾದರೆ ಚಿಕ್ಕಗೊಂಡನನ್ನ ಚಿಕ್ಕಹೊಳೆ ಕೂಡಿಸತಿದ್ದೆ!' ಎಂದು ಹೇಳಿದ. ಕಲ್ಲಜ್ಜ ದುಡುಕದಿರುವಂತೆ ಮಗಂಗೆ ಹೇಳಿ, ಸೂಕ್ಷ್ಮವಾಗಿ ಮಲ್ಲಿ-ಗೊಂಡರ ಕಿಂವಿಗೆ ಈ ಮಾತನು ಮುಟ್ಟಿಸಿ, ಬುದ್ಧಿಯವರು ತಮ್ಮನಿಗೆ ಬುದ್ಧಿ ಮಾತನು ಹೇಳಬೇಕೆಂದು ಭಿನ್ನಯಿಸಿದ.

....ನಾಯ ಬಾಲದ ಡೊಂಕು ಏನು ಮಾಡಿದರೆ ಹೋದೀತು? ಕಾಮಾತುರಂಗೆ ಎಲ್ಲಿಯ ಅಂಜಿಕೆ, ಎಲ್ಲಿಯ ನಾಚಿಕೆ? ಹೆಣ್ಣಿನ ಹುಚ್ಚು-ಹಿಡಿದ ಚಿಕ್ಕಗೊಂಡ, ಹೂವಮ್ಮನ ಬೆನ್ನನೆ ಕಾಯತೊಡಗಿದ್ದ. ಒಂದು ದಿನ ಹೊಲದಲ್ಲಿ ಹೂವಮ್ಮ ಒಬ್ಬಳೇ ಇದ್ದುದನು ಗುರುತಿಟ್ಟು, ಈ ಕೀಚಕ ಹೂವಮ್ಮನ ಮೈಮುಟ್ಟಹೋದ ಸಂಚುಮಾಡಿಕೊಂಡು ಕುಳಿತ ಜಕ್ಕಣ್ಣ— ಅವನ ತಮ್ಮ ಹೋರಿಗ— ಇಬ್ಬರೂ ಸೇರಿ, ಚಿಕ್ಕಗೊಂಡನನು ಹೊಡೆದು ಕೆಡಹಿ, ಕತ್ತು ಮುರಿದರು. ಹಾಗೆಯೇ ಹೋಗಿ, ಮಲ್ಲಿಗೊಂಡ ನೆದುರು ನಡೆದ ಸಂಗತಿಯನೆಲ್ಲ ಅರಿಕೆಮಾಡಿ 'ನಿಮ್ಮ ತಮ್ಮನನ್ನು ನಾವು ಕೊಂದಿದ್ದೇವೆ; ಆ ತಪ್ಪಿಗಾಗಿ ನಮ್ಮನು ನೀವು ಕೊಂದುಬಿಡಿರಿ'

ಎಂದು ಬೇಡಿಕೊಂಡು, ಬಾಗಿ ನಿಂತರು. ತಮ್ಮ ಚಿಕ್ಕಗೊಂಡನ ತಪ್ಪು ಸಹಿಸಲಾರದ್ದೆಂದು ಮಲ್ಲಿಗೊಂಡ ಯೋಚಿಸಿದ. ಸತ್ಯಶೀಲರಾದ ಜಕ್ಕಣ್ಣ-ಹೋರಣ್ಣರನು ಬಿಗಿದು ತಬ್ಬಿಕೊಂಡು, ಅವರ ಕೊಲೆಯ ತಪ್ಪನು ಮನ್ನಿಸಿದ. ಸ್ತ್ರೀದೇವತೆಯನು ಅವಮಾನಗೊಳಿಸಿದ ಕಾಮದ ಕೈಗೊಂಬೆ ಚಿಕ್ಕಗೊಂಡನಿಗೆ ಆಗಿರುವ ಶಿಕ್ಷೆ ಸಾಲದೆಂದು ಅಸಮಾಧಾನಪಟ್ಟುಕೊಂಡು, ಚಿಕ್ಕಗೊಂಡನ ಹೆಣ ಬಿದ್ದ ಹೊಲದಲ್ಲಿ, ಆತನ ಮೂರ್ತಿಯಂ ಕೊರೆದ ಕಲ್ಲೊಂದನು ಚೆಲ್ಲಿಸಿ, ಹೋಗುವ ಬರುವ ಹಾದಿಕಾರರೆಲ್ಲ ಮೂರ್ತಿಯ ಮೇಲೆ ಉಗುಳಿ, ಹಿಡಿಗಲ್ಲನು ಹಾಕಿ ಹೋಗಬೇಕು — ಎಂದು ಕಟ್ಟಳೆಯನು ಸಾರಿದ.

....ಚಿಕ್ಕಗೊಂಡ ಸತ್ತರೂ ಅವನ ತಾಯಿ ಮಹಾದೇವಿ ದುಕ್ಕಮಾಡ-ಲಿಲ್ಲ, 'ಪಾಪಿಮಕ್ಕಳು ಸಾಯುವುದೇ ಕುಲಕೆ ಕ್ಷೇಮ' ಎಂದು ನುಡಿದು ತಾನೂ ಹೋಗಿ, ಆ ಕಲ್ಲ ಮೇಲೆ ಉಗುಳಿ, ಹಿಡಿಗಲ್ಲನು ಹಾಕಿ ಬಂದಳು. ಇಂತಿದು ಮಲ್ಲಿಗೊಂಡನ ಮಹಾಮಹಿಮೆ ಶ್ರೀ ಶ್ರೀ ಶ್ರೀ"

ಕಾಗದವನ್ನು ಓದಿ ಮುಗಿಸಿದೆ. ಅಂದಿನ ಮಹಾಮಹಿಮ ಮಲ್ಲಿ-ಗೊಂಡನನ್ನು ಕಾಣಬಹುದಾದ ಮನ್ನಣೆಯ ನೋಟದಿಂದ ಹಿರಿಯಗೌಡ ರನ್ನು ನೋಡಲು ತೊಡಗಿದೆ. ಮನದಲ್ಲಿಯೆ ಅವರ ಮನೆತನದ ಭಾಗ್ಯ ದೇವತೆಯನ್ನು ವಂದಿಸಿದೆ.

ಓದಿದುದನ್ನೆಲ್ಲ ಮನಸ್ಸುಗೊಟ್ಟು ಕೇಳಿದ ಹಿರಿಯಗೌಡರು ಹೇಳಿ-ದರು :

"ನೋಡಪಾ, ಇದೆಲ್ಲಾ ಸಂಗತಿ ನಮ್ಮ ಮನ್ಯಾಗs ಇದ್ದರೂ ನಮಗ ಗೊತ್ತಿದ್ದಿಲ್ಲ. ನೀವು ಬಂದ್ರಿ; ಇದನ್ನೆಲ್ಲಾ ಓದಿ ನಮಗ ತಿಳಿವಳಿಕೀ ಮಾಡಿಕೊಟ್ಟಿರಿ !"

ನಾನು ಭಾವಾವಿಷ್ಟನಾಗಿ ಮೆಲ್ಲಗೆ ಗೌಡರಿಗೆ ಹೇಳಿದೆ :

"ಇಂಥಾ ಸಂಗತಿಗಳನ್ನೆಲ್ಲಾ ನಾವು ಮರತಬಿಟ್ಟದ್ದರಿಂದsನs, ನಾವು ಮನಸ್ಯಾರು ಇದ್ದೀವೀ ಅಂಬೋದನ್ನ ಕೂಡಾ ಮರತು ನಡದೀವಿ ! ಗೌಡರ, ನಿಜವಾದ ಧರ್ಮಾ ಅಂಬೋದು ಹೀಂಗ— ನಮ್ಮ ಕಣ್ಣಿಗೆ

ಕಾಣಿಸದಹಾಂಗ— ಹಳೆಯ ಕಡತದೊಳಗ— ಕಲ್ಲುಬಂಡೆಗಳ ಬುಡಕ— ಹುದುಗಿ ಕುಳಿತ್ತದ. ಸುಳ್ಳುಸುಳ್ಳೇ ಯಾವುದನ್ನೋ ನಾವು 'ಧರ್ಮ' ಅಂತ ಎತ್ತಿಕೊಂಡು ಹೊರಟೇವಿ. ನಿಮ್ಮೂರ ಸೀಮೆಯ ಕಲ್ಲು ಇಂದು ನನಗೊಂದು ಒಳ್ಳೆಯ ಧರ್ಮದ ಮಾತನ್ನು ಕಲಿಸಿತು."

ಹಿರಿಯಗೌಡರು ಹೆಮ್ಮೆಯ ಕಿರುನಗೆ ನಗುತ್ತ ಆ ಕಾಗದ ತೆಗೆದು-ಕೊಂಡು, ಮತ್ತೆ ಆ ಹಳೆಯ ಗಂಟಿನಲ್ಲಿ ಕಟ್ಟಿ ನಾಗವಂದಿಗೆಯ ಮೇಲೆ ಇಟ್ಟು-ಬಿಟ್ಟರು. ನಾನಾಗ ಮನದಲ್ಲಿ ಸೀಮೆಯ ಕಲ್ಲನ್ನೂ, ಮಲ್ಲಿಗೊಂಡನ ಧರ್ಮ-ಮೂರ್ತಿಯನ್ನೂ, ಚಿಕ್ಕಗೊಂಡನ ಅವಿವೇಕದ ಬಾಳನ್ನೂ ಮನದಲ್ಲಿಯೆ ಕಾಣತೊಡಗಿದೆ.

# ಜೋಗತೀ ಕಲ್ಲು

ಹೊಸ ಮದುವಣಿಗಿತ್ತಿ ಊರಿಗೆ ಬಂದೊಡನೆಯೆ, 'ಜೋಗತಿಯ ಕಲ್ಲ'ನ್ನು ಪೂಜಿಸಿ ಬರಬೇಕಾದುದು ಆ ಹಳ್ಳಿಯಲ್ಲಿ ಬಹುದಿನದಿಂದ ಬಂದ ಸಂಪ್ರದಾಯ.

ನನ್ನ ತಂಗಿಯ ಮದುವೆಯಾದ ಮೇಲೆ, ಮೊದಲನೆಯ ಸಲ ಅತ್ತೆಯ ಮನೆಗೆ ಹೋಗುವಾಗ, ಜೊತೆಗೆ ನಾನೂ ಹೋಗಬೇಕಾಗಿ ಬಂತು. ಹದಿನೆಂಟು ಮೈಲುಗಳ ಎತ್ತಿನ ಬಂಡಿಯ ಪ್ರಯಾಣ. ಬಯಲು ಸೀಮೆಯ ಕಾಡು ದಾರಿ, ನಡುವೆ ಒಂದು ಹೊಳೆಯನ್ನು ಬೇರೆ ದಾಟಬೇಕು. ಇಂದು ಅದೆಲ್ಲ ತುಂಬ ಕಷ್ಟದ ಮಾತಾಗಿ ಕಾಣುತ್ತಿದ್ದರೂ, ಅಂದಿನ ನನ್ನ ಕುತೂಹಲದ ಬಾಳಿನಲ್ಲಿ, ಇಂತಹುದೆಲ್ಲವೂ ಕೌತುಕದ ಮಾತಾಗಿ ಇರುತ್ತಿದ್ದಿತು. ಕಂಡ ಗಿಡ-ಮರಗಳಲ್ಲಿ ಹೊಸತನ, ಕಂಡ ಹೊಲ ನೆಲಗಳಲ್ಲಿ ಹೊಸತನ. ದಾರಿಯ ಏರು ಒಂದು ಬಗೆಯ ಹುರುಪನ್ನು ಹುಟ್ಟಿಸಿದರೆ, ತಗ್ಗು ಇನ್ನೊಂದು ಬಗೆಯ ಹುಮ್ಮಸವನ್ನು ಉಂಟುಮಾಡುವುದು. ಹೊಳೆಯ ತಿಳಿನೀರಿನ ಪ್ರವಾಹವಂತೂ ಬಂಡಿಯಲ್ಲಿ ನನ್ನನ್ನು ಕುಳಿತಿರಲು ಬಿಡಲಿಲ್ಲ. ಕೆಳಗೆ ಇಳಿದು ಹರಿಯುವ ನೀರಲ್ಲಿ ನಡೆಯುತ್ತಿರುವಾಗ ಅನುಭವಿಸಿದ ಉಲ್ಲಾಸದ ರೀತಿ, ಅನುಭವಿಸಿದರಿಯೇ ಗೊತ್ತಾಗುವಂತಹದು.

ಅಂದು ಸಂಜೆಗೆ ಹಳ್ಳಿಗೆ ಬಂದು ತಲ್ಪಿದೆವು. ಸಾಂಪ್ರದಾಯಿಕವಾಗಿ ನಡೆಸಬೇಕಾದ ಹೊಸ ಮದುವಣಗಿತ್ತಿಯ ಗೃಹಪ್ರವೇಶ ಸಮಾರಂಭದ ವಿಧಿ-ವಿಧಾನಗಳೆಲ್ಲ ಮುಗಿದುವು. ಬೀಗರ ಮನೆಯ ಮೊದಲನೆಯ ಔತಣದೂಟವಾಯಿತು.

ಮರುದಿನ ಬೆಳಗಿನಲ್ಲಿ, ಮನೆಯ ಹಿರಿಯ ಮುತ್ತೈದೆಯರು ಬೇಗನೆ ಎದ್ದು, ಮದುವಣಗಿತ್ತಿಯನ್ನು ಎಬ್ಬಿಸಿ ಎಣ್ಣೆನೀರು ಎರೆದರು. ಹೊಸ ಸೀರೆ-ಕುಪ್ಪಸಗಳ ಪ್ರಸಾಧನ ನಡೆಯಿತು. ನನ್ನ ತಂಗಿಯ ಜೊತೆಯಲ್ಲಿ ಬೇರೆ ಐದಾರು ಜನ ಸುವಾಸಿನಿಯರೂ ಶೃಂಗರಿಸಿಕೊಂಡು ಸಿದ್ಧರಾದರು.

ಎಲ್ಲರ ಕೈಯಲ್ಲಿಯೂ ಪೂಜಾಸಾಮಗ್ರಿಗಳ ತಟ್ಟೆಗಳು. ವಾದ್ಯವೈಭವದೊಂದಿಗೆ ಅವರೆಲ್ಲ ಮನೆಯಿಂದ ಹೊರಟರು. ನಾನಾಗ ನನ್ನ ತಂಗಿಯ ಭಾವನನ್ನು ಕೇಳಿದೆ:

“ ಇವರೆಲ್ಲಾ ಈಗ ಎಲ್ಲಿಗೆ ಹೋಗತಾರೆ ? ”

“ ಜೋಗ್ತೀಕಲ್ಲು ಪೂಜೆ ಮಾಡಲಿಕ್ಕೆ. ”

ಆಶ್ಚರ್ಯದಿಂದ ನಾನು ಕೇಳಿದೆ:

“ ಜೋಗ್ತೀಕಲ್ಲು ಪೂಜೆ ಮಾಡಬಲಿಕ್ಕೆ ? ”

“ ಹೌದು, ಇದು ಈ ಹಳ್ಳಿಯದೊಂದು ಸಂಪ್ರದಾಯ. ಊರಹೊರಗೆ ಹಳ್ಳದ ದಂಡೆಯ ಮೇಲೆ ‘ ಜೋಗತೀ ಕಲ್ಲು ’ ಎಂದು ಒಂದು ಕಲ್ಲು ಇದೆ. ಹೊಸತಾಗಿ ಅತ್ತೆಯ ಮನೆಯ ಸೊಸೆಯದು ಇಲ್ಲಿಗೆ ಬಂದ ದಿನ— ಇಲ್ಲವೆ ಮರುದಿನ, ಅಲ್ಲಿಗೆ ಹೋಗಿ ಆ ಕಲ್ಲನ್ನು ಪೂಜೆ ಮಾಡಿ ಬರಬೇಕಾಗತದೆ ! ”

ಕುತೂಹಲಿಯಾಗಿ ನಾನು ಕೇಳಿದೆ:

“ ಎಲ್ಲ ಜಾತಿ-ಪಂಗಡಗಳಲ್ಲಿಯೂ ಈ ರೂಢಿಯಿದೆಯೇನು ? ”

“ ಎಲ್ಲಾ ಜಾತಿ–ಪಂಗಡಗಳಷ್ಟೇ ಅಲ್ಲ; ಪ್ರತಿಯೊಂದು ಮನೆಯಲ್ಲೂ ಈ ಸಂಪ್ರದಾಯ ನಡೆಯಿಸಬೇಕಾಗುತ್ತದೆ. ಮುಸಲ್ಮಾನರ ಮನೆ ಇಲ್ಲಿ ಹೆಚ್ಚಾಗಿ ಇಲ್ಲ; ಮೂರು-ನಾಲ್ಕು ಇವೆ. ಅವರ ಮನೆಯ ಮೊದಲಗಿತ್ತಿಯರೂ ಜೋಗತೀಕಲ್ಲನ್ನು ಪೂಜಿಸಿ ಬರತಿರತಾರೆ ! ”

ನನಗೆ ಇದೊಂದು ಆಶ್ಚರ್ಯದ ವಿಷಯವಾಗಿ ತೋರಿತು. ನಮ್ಮ ಕನ್ನಡಿಗರ ಮನೆಗಳಲ್ಲಿ ಕುಲ–ಕುಲಕ್ಕೊಂದು ದೇವತೆ; ಮನೆಮನೆಗೊಂದು ಸಂಪ್ರದಾಯ. ‘ ಗೊಂದಲ ’ ಕೆಲವರು ಹಾಕಿಸಿದರೆ, ‘ ಗುಗ್ಗುಳ ’ ಕೆಲವರು ಎಬ್ಬಿಸುತ್ತಾರೆ. ‘ ಮುರಳಿ-ವಗ್ಗಯ್ಯ ’ರನ್ನು ಕೆಲವು ಮನೆತನಗಳಲ್ಲಿ ಕುಣಿಸಿದರೆ, ‘ ವೀರಮುಖ ’ ಕೆಲವು ಮನೆತನಗಳಲ್ಲಿ ಹೊರಡುವುದು. ಇವೆಲ್ಲ ಒಬ್ಬೊಬ್ಬರ ಮನೆಯ ಪದ್ಧತಿಗಳು. ಆದರೆ ಜೋಗತೀಕಲ್ಲಿನ ಪೂಜೆ ಈ ಹಳ್ಳಿಯಲ್ಲಿ ಸಾರ್ವಜನಿಕ. ಯಾವ ಜಾತಿ–ಕುಲಭೇದಗಳಿಗೂ ಎಡೆಯಿಲ್ಲ. ಬೆರಗಿನ ದನಿಯಲ್ಲೇ ಕೇಳಿದೆ:

“ ನಾನಿಲ್ಲಿ ಇದನ್ನು ಹೊಸತಾಗಿಯೆ ಕೇಳುತ್ತಿದ್ದೇನೆ; ನಮ್ಮಲ್ಲಿ ಇತಿಹಾಸದ ಪ್ರತಿನಿಧಿಗಳಾಗ ಮಾಸ್ತೀಕಲ್ಲು ಇವೆ— ವೀರಗಲ್ಲು ಇವೆ.

ಆದರೆ 'ಜೋಗತೀಕಲ್ಲು' ಎಂದರೇನು? ನಾನು ಎಲ್ಲಿಯೂ ಕೇಳಿಲ್ಲ ಈ ಹೆಸರನ್ನು!"

ಭಾವ ಹೇಳಲು ತೊಡಗಿದರು:

"ಇದೊಂದು ನಮ್ಮ ಹಳ್ಳಿಯದೇ ವೈಶಿಷ್ಟ್ಯ. ನಮ್ಮ ಊರಿಗೆ ಬಂದ ಸೊಸೆಯರೆಲ್ಲ, ಮೊದಲು ಅಲ್ಲಿಗೆ ಹೋಗಿ ಆ ಕಲ್ಲನ್ನು ಪೂಜೆ ಮಾಡಿ ಬರಬೇಕಾಗುವುದು. ಇದರಿಂದ ಅವರ ಮುತ್ತೈದೆತನದ ಸೌಭಾಗ್ಯ, ಸಂತಾನ, ಸಂಪತ್ತಿ ಹೆಚ್ಚುವುದೆಂದು ಇಲ್ಲಿಯ ಜನರೆಲ್ಲರ ತಿಳಿವಳಿಕೆ."

ನಾನಾಗ ಸುಮ್ಮನೆ ಕುಳಿತೆನಾದರೂ 'ಜೋಗತಿಯ ಕಲ್ಲು' ನನ್ನ ಮನಸ್ಸನ್ನು ಸುಮ್ಮನಿರಗೊಡಲಿಲ್ಲ. ಈ ಊರನ್ನು ಬಿಡುವುದರಲ್ಲಿಯೇ ಅದನ್ನೊಂದು ಸಲ ನೋಡಬೇಕೆಂಬ ಆತುರ, ಆಗಾಗ ಮನಸ್ಸನ್ನು ಕೆಣಕಲು ತೊಡಗಿತು.

* * * *

ಅಂದಿಯೇ ಸಾಯಂಕಾಲ ತಿರುಗಾಡಲಿಕ್ಕೆಂದು ಹೊರಟು, ಜೋಗತಿಯ ಕಲ್ಲಿನ ಕಡೆಗೇ ಹೋದೆವು. ಜೊತೆಯಲ್ಲಿ ನನ್ನ ತಂಗಿಯ ಭಾವ ಇದ್ದರು.

ಊರ ತೆಂಕಣಕ್ಕೆ ದೊಡ್ಡದೊಂದು ಹಳ್ಳ ಹರಿಯುತ್ತಲಿದೆ. ಆದರ ಈಚೆಯ ದಂಡೆಯ ಹೊಲದಲ್ಲಿ, ಪುರಾತನ ಕಾಲದ ಆಲದಮರವೊಂದು ಬೀಳಲು ಬಿಟ್ಟು ಹಬ್ಬಿ ಹರಡಿ ನಿಂತುಕೊಂಡಿದೆ. ಅದರ ಅಡಿಯಿಲ್ಲಿ ನಡೆದು ಕೆಲವು ಹೆಜ್ಜೆ ಹೋದ ಮೇಲೆ, ಕಲ್ಲುಗಾರೆಗಳಿಂದ ಕಟ್ಟಿಸಿದ ಒಂದು ಚಚ್ಚೌಕಾದ ಕಟ್ಟೆ ಕಣ್ಣಿಗೆ ಬೀಳುವುದು. ಕಟ್ಟೆಯ ನಡುವೆ, ಹೆಣ್ಣಿನ ಮೂರ್ತಿಯನ್ನು ಕಡೆದ – ಸುಮಾರು ಮೂರಡಿ ಎತ್ತರದ ಕಲ್ಲನ್ನು ನಿಲ್ಲಿಸಲಾಗಿದೆ. ಮೂರ್ತಿ-ನಿರ್ಮಾಣದಲ್ಲಿ ಶಿಲ್ಪಿಯ ನೈಪುಣ್ಯವೇನೂ ತೋರಿಬರುವಂತಿಲ್ಲ. ಆದರೆ ಆ ಹಳ್ಳಿಯ ಜನರೆಲ್ಲರ ಪ್ರಾಮಾಣಿಕ ಭಕ್ತಿಯ ಪೂಜೆ, ಆ ಮೂರ್ತಿಗೆ ಒಂದು ಸಾತ್ವಿಕ ಸೌಂದರ್ಯವನ್ನು ತಂದು ಕೊಟ್ಟಿದೆ.

ಕರಿಯ ಶಿಲೆ; ಎರೆದ ಎಣ್ಣೆ–ಬೆಣ್ಣೆಗಳಿಂದ ಇನ್ನಷ್ಟು ಕಪ್ಪಾಗಿ ಕಾಣುತ್ತಿದ್ದಿತು. ದಟ್ಟವಾದ ಎಲೆಗಳುಳ್ಳ ಆಲದ ಮರದ ಛಾಯೆ, ಅದರ ಕಪ್ಪಿಗೆ

ಇನ್ನಿಷ್ಟು ಒಪ್ಪ ಹಾಕಿದ್ದಿತು. ಪೂಜಿಸಿದ ಮಂಗಲದ್ರವ್ಯಗಳೂ, ಹೂಮಾಲೆಗಳೂ, ಉರಿಸಿದ ಕರ್ಪೂರ ಧೂಪ ಅಗರಬತ್ತಿಗಳ ವಾಸನೆಯೂ— ಆ ಮೂರ್ತಿಯ ದೈವೀಭಾವಕ್ಕೆ ಉತ್ತೇಜಕವಾಗಿದ್ದುವು.

ಮೇಲೆ ನೋಡಿದೆ, ಮರದ ರೆಂಬೆಗಳಿಗೆ ಚಿಕ್ಕಪುಟ್ಟ ತೊಟ್ಟಿಲುಗಳು.... ವಿಧವಿಧದ ತೋರಣಗಳು. ಹಳ್ಳಿಯ ಜನರೆಲ್ಲರ ಸತ್ಯವಾದ ಭಕ್ತಿ-ಭಾವ ಅಲ್ಲಿ ಪ್ರವಹಿಸುತ್ತಿರುವಂತೆ ಕಂಡಿತು. ನನ್ನ ಈ ಭಾವನೆಗೆ ಹತ್ತಿರದಲ್ಲಿಯೇ ಹರಿ-ಯುತ್ತಿರುವ ಹಳ್ಳದ ಪ್ರವಾಹದ ಸಪ್ಪಳು ಪೋಷಕವಾಗಿ ಪರಿಣಮಿಸಿತು.

ಯಾವ್ಯಾವುವೋ ವೇದಾಂತಗ್ರಂಥಗಳ ವಾಚನದಿಂದ 'ಸಚ್ಚಿದಾನಂದ ಸ್ವರೂಪನಾದ ದೇವರು ಒಬ್ಬನೆ!' ಎಂಬ ನಂಬುಗೆಯನ್ನು ನಾನು ತಳೆದವ-ನಾಗಿದ್ದರೂ, ಇಷ್ಟೆಲ್ಲ ಜನರ ಭಕ್ತಿಯ ಕಾಣಿಕೆ ಪಡೆಯುತ್ತಿರುವ ಈ ಮೂರ್ತಿಯು ದೇವರೇಕೆ ಆಗಿರಬಾರದು?.... ಎಂದು ಆಗಿನ ನನ್ನ ಪ್ರಸನ್ನವಾದ ಹೃದಯ ಭಾವಿಸಿತು. ಸರಿ, ಇದೂ ದೇವರೇ ಆಗಿರಲಿ! ಆದರೆ ಇದಕ್ಕೆ 'ಜೋಗತೀ-ಕಲ್ಲು' ಎಂದು ಏಕೆ ಹೆಸರು ಬಂದಿರಬಹುದು?

ಜೊತೆಯಲ್ಲಿದ್ದವರನ್ನು ಕೇಳಿದೆ; ಇದರ ವಿಷಯ ಅವರಿಗೇನೂ ಗೊತ್ತಿ-ದ್ದಂತೆ ಕಾಣಲಿಲ್ಲ. ಅವರು ಹೇಳಿದರು: "ಇದರ ವಿಷಯ ನಿಮಗೆ ವಿಶದ ವಾಗಿ ತಿಳಿಯಬೇಕೆಂದರೆ, ನಮ್ಮ ಧರಮಣ್ಣನ ಬಾಯಿಂದ ಕೇಳಬೇಕು. ಅವನಿಗೆ ಇದರ ಕಥೆಯೆಲ್ಲಾ ಗೊತ್ತು."

* * * "

ಅಂದು ರಾತ್ರಿ ಧರಮಣ್ಣನನ್ನು ಮನೆಗೆ ಕರೆಯಿಸಿ ಆಯಿತು. ಊರ ಒಕ್ಕಲಿಗರಲ್ಲಿಯ ಹಿರಿಯ ಧರಮಣ್ಣ. ಸುಮಾರು ಎಂಬತ್ತು ವರ್ಷದ ವಯಸ್ಸು. ಎತ್ತರದ ನಿಲುವು. ಮೊಣಕಾಲ ವರೆಗೆ ಕೊಡೆಯಿಂವೆಯ ಚಣ್ಣ. ಬರಿಯ ಮೈಮೇಲೆ ಹೊದ್ದಿರುವ ಒಂದು ದಪ್ಪ ಧೋತರ, ತಲೆಗೆ ಒಂದು ಬಣ್ಣದ ಮುಂಡಾಸ. ಬಲಗಿವಿಯಲ್ಲಿ ಗಂಡುಬಾವಲಿ; ಎಡದ ಮುಂಗೈಗೆ ಬೆಳ್ಳಿಯ ಕಡೆಯ. ಗಲ್ಲಮೀಸೆಗಳು. ಕೈಯಲ್ಲೊಂದು ಉದ್ದ ಕೋಲು. ಬಂದವನೇ 'ಶರಣಾರ್ಥಿ' ಎಂದು ಹೇಳಿ, ದೂರದಲ್ಲಿ ಗೋಡೆಗೆ ಆತು ಕುಳಿತು-ಕೊಂಡ. ನಮ್ಮ ತಂಗಿಯ ಭಾವ ಅವನಿಗೆ ಹೇಳಿದರು:

“ ಇವರು ನಮ್ಮ ಹೊಸಾ ಶೀಗರೇನಪಾ, ಧರಮಣ್ಣಾ ! ಇವರು ನಿನ್ನ ಬಾಯಿಂದ ಜೋಗತೀಕಲ್ಲಿನ ಕತೀ ಕೇಳಬೇಕಂತಾರ.... ”

ಹಾಗೆಯೇ ನನ್ನ ಕಡೆಗೆ ಹೊರಳಿ ಹೇಳಿದರು :

“ ಆ ಕತಿ ಹೇಳುವವ ಸದ್ಯ ಈ ಊರಾಗ ಇಂವ ಒಬ್ಬನs ಉಳಿದಾನ ನೋಡ್ರಿ ! ” ಮುದುಕ ತನ್ನ ಕಂಚಿನ ಕಂಠದಿಂದ— ಹಲ್ಲಿಲ್ಲದ ಬಾಯ— ಮಾತಿನಿಂದ ನುಡಿದ :

“ ಏನ ತಂದೆ, ಆ ದಿನಾ ಎಲ್ಲಾ ಹೋಗಿಬಿಟ್ವು, ನನ್ನ ಒಡ್ಯಾ ! ಆ ಜೋಗತೀಕಲ್ಲಿನ ಮ್ಹಾತ್ಮ್ಯ ಏನ ಸಾಮಾನೀ ಅಲ್ರಿ ! ”

ನನ್ನಲ್ಲಿ ಆತುರ ಹೆಚ್ಚಿತು. ಕತೆಯನ್ನು ಕೇಳಲಿಕ್ಕೆ ಕಿವಿಗೊಟ್ಟು ಕುಳಿತೆ. ಧರಮಣ್ಣ ಕತೆಗೆ ಮೊದಲು ಮಾಡಿದ :

“ ಈಗ ಇನ್ನೂರು ವರಸದ ಮಾತು ರಾಯರ ! ಈ ಕೆಂಪ ಮೋತೀ ಮಂದೀ ಕೈಯಾಗ ಅರಸೊತ್ತಿಗಿ ಇನ್ನೂ ಬಂದಿದ್ದಿಲ್ಲಂತರಿ; ಪುಣ್ಣೆ ಪಟ್ಟಣ-ದಾಗ ಪೇಶವ್ಯಾನ ಆಳಿಕಿ ಆದs ಆರಂಬ ಆಗಿರೋದು. ಆಗ ನಮ್ಮ ಈ ಹಳ್ಳಿಗೆ ಯಜಮಾನ ಕಾಡನಾಯಕ. ಕಾಡನಾಯಕಾ ಅಂದರ....ಹಂತಾ ಹಿಂತಾ ಗಡಿ ಅಲ್ಲರಿ ! ಜೋಡು ಕುರಗೀ ಬಂಟ ಅಂವ. ಕಾಡನಾಯಕನ ಹೆಸರು ಕೇಳಿದರ, ವೈರಿ ನಿಂತಲ್ಲೇ ನಡಗಿ ಬೀಳತಿದ್ದನಂತ. ಪೇಶವ್ಯಾನ ಕಡಿಂದ ಅಂವಗ ಮುರಗೀ ಮುಂಡಾಸ, ಬಿಚ್ಚುಗತ್ತಿ, ಮೇಜ್ವಾಗಿ ಬಂದಿದ್ವು. ನಮ್ಮ ನಾಡೊಳಗಿನ ಬಂಟರನ್ನೆಲ್ಲಾ ದಂಡು ಕೂಡಿಸಿ, ತಾ ಅದಕ್ಕ ‘ ದಳ-ವಾಯಿ ’ ಅನಿಸಿಗೋತಿದ್ದ.

ಕಾಡನಾಯಕನ ಮಗ ಹೆಬ್ಬುಲಿನಾಯಕ. ಇನ್ನೂ ಮಕಮೀಸಿ ಮಿಂಡ. ಒಳೇ ಗಂಡ ಗಜವೀರ. ಹೆಸರಾದ ಬ್ಯಾಟಿಗಾರ. ಅವನ ಜೋಡೀ ಕುಸ್ತೀ ಗಡಿಗೋಳು ಈ ನಾಡಿನಾಗs ಇದ್ದಿದ್ದಿಲ್ಲ. ಅಪ್ಪನ ದಂಡಿನೊಳಗ ಹೆಬ್ಬುಲಿನಾಯಕನೂ ಒಬ್ಬ ಮೇಲಾಳು. ಪೇಶವ್ಯಾನ ದಂಡಿನ ಸಂಗತಿ ಹೋಗಿ, ಆಗಾಗ ಯುದ್ಧಾ ಆಡಿಯೂ ಬರತಿದ್ದನ್ರಿ.

ಅದೇ ಕಾಲದೊಳಗ ಈ ಊರಾಗ ‘ ರೇಣವ್ವ ’ ಅಂತ ಒಬ್ಬಾಕಿ ಹಿರೇ ಜೋಗ್ತಿ ಇದ್ದಳಂತ. ಆಕಿ ಎಲ್ಲಮ್ಮನ ‘ ಜಗಾ ’ ಹೊತಗೊಂಡು, ದೇಸ-

ದೇಸ ಎಲ್ಲಾ ಸುತ್ತಾಡಿ ಬರತಿದ್ದಳು. ಆಕೀ ಜತೀಗೆ— ಬ್ಯಾರೇ ಮೂರು-ನಾಕು ಮಂದಿ ಜೋಗತ್ಯಾರು. ಅವರು ಚೌಡಿಕಿ, ತಂತಣಿ, ತಾಳ ಬಾರಸ-ವರು; ರೇಣವ್ವ ಹಾಡಿ ಕತೀ ಹೇಳುವಳು. ರೇಣವ್ವನ ಕತೀ ಅಂದರ ಸುತ್ತಿನ ನಾಡಾಗೆಲ್ಲಾ ಪರಸಿದ್ಧರಿ !....

ಹೀಂಗ ಇರೂವಾಗ ಒಮ್ಮೆ ಏನಾತ ಅಂತೀರಿ ! ರೇಣವ್ವ ಜೋಗತಿ ದೇಸದ ವ್ಯಾಗ ಹೋಗಿ ತಿರುಗಿ ಬರುವಾಗ, ಸಂಗತೀ ಒಂದು ಹುಡುಗಿನ್ನ ಕರಕೊಂಡು ಬಂದಳಂತರಿ ! ತಂದೀ ತಾಯೀ ಇಲ್ಲದ ಪರದೇಶಿ ಹುಡುಗಿರೀ ! ರೇಣವ್ವಗೂ ಬ್ಯಾರೇ ಯಾರೂ ದಿಕ್ಕು ಇರಲಿಲ್ಲ; ಆ ಪರದೇಶಿ ಹುಡಿಗಿನ್ನ ಜೋಪಾನಾ ಮಾಡಿದಳು. ಇನ್ನೂ ಹತ್ತು ವರಸ ತುಂಬೂದಕ್ಕ ಮೊದಲು ಆ ಹುಡಿಗಿಗೂ ಮುತ್ತು ಕಟ್ಟಿ, ಜೋಗತಿನ್ನ ಮಾಡಿಬಿಟ್ಟ-ಳಂತರಿ....

ಹುಡಿಗೀ ರೂಪೇನ್ರಿ— ಒಳ್ಳೇ ಕಡ್ಡೀಲೆ ಕೊರದು ಕೊರದು ಬರ-ದಂತಾದರಿ ! ಶ್ಯಾದಿಗೀ ಗರೀ ಹಾಂಗ ಮೈಬಣ್ಣ. ಕಣ್ಣೇನ, ಮೂಗೇನ, ಕಪ್ಪು ಉಂಗುರಗೂದಲೇನ, ಸಿಮ್ಮ ಹಾರೂರ ಮಂದ್ಯಾಗ ಸುದ್ಧಾ ಹಂತಾ ಚೆಲಿವಿ ಸಿಗೂದು ಅಪರೂಪ— ಅನ್ನೂ ಹಾಂಗ ಇದ್ದಳಂತ ನೋಡ್ರಿ !

ರೇಣವ್ವ ಕತೀ ಹೇಳಿ, ಜೋಗಾ ಬೇಡಿ, ಗಳಿಸಿದ ರೊಕ್ಕೇನ ಕಡಿಮಿ ಇರಲಿಲ್ಲರಿ ! ಹುಡಿಗಿ ಸಣ್ಣದಿದ್ದಾಗ, ರೇಣವ್ವನ ಜೋಡಿಗೆ ನಾಡವ್ಯಾಗ ಹೋಗಿ ಹೋಗಿ ಬರತಿತ್ತು; ರೇಣವ್ವ ಹೇಳೂ ಕತಿಗೋಳನೆಲ್ಲಾ ಮನಸು-ಗೊಟ್ಟು ಕೇಳತಿತ್ತು. ಬಾಳ ಹುಶಾರ ಇದ್ದಳಂತ್ರಿ ಹುಡಿಗಿ. ಒಂದ ಸಾರೇ ಯಾವದಾದರೂ ಒಳ್ಳೇ ಮಾತನ್ನ ಕೇಳಿದಳಂದರ, ಅದನ ಮನಸಿನ್ಯಾಗ ಕೊರದು ಇಟಗೋತಿದ್ದಳಂತರಿ !

ಈ ನಾಕುಮಗಳನ್ನ ರೇಣವ್ವ ' ಚಂದಾ ' ಅಂತ ಚೆಂದದ ಹೆಸರಿಟ್ಟು ಕರೀತಿದ್ದಳಂತ. ಹುಡಿಗಿ ದಿನದಿನಕ್ಕ ಬೆಳದು ದೊಡ್ಡಾಕಿ ಆದಳು. ಮನ್ಯಾಗ ಮನಸು ನೆನಸಿದಂತಾ ಊಟ ಉಡಲಾಕ ಕಡಿಮಿ ಇಲ್ಲ; ತೊಡಲಾಕ ಕಡಿಮಿ ಇಲ್ಲ. ಸಿರಿಮಂತರ ಮಗಳ್ಹಾಂಗ ಚೆಂದಾ ಸುಕಪಿಂಡಾಗಿ ಬೆಳೆದು ಬಿಟ್ಟಳು. ಊರಾಗಿನ ಪೋರಗೋಳ ಕಣ್ಣೆಲ್ಲಾ ಚೆಂದಕ್ಕನ ಮ್ಯಾಲ ! ಹೇಳಿ

ಕೇಳಿ ಜೋಗತಿ; ಆಕಿನ್ನ ಕಣ್ಣಿಟ್ಟು ನೋಡೂದು ತಪ್ಪಂತ ಹೇಳುವರಾದರೂ ಯಾರ್ರೀ ?....

ಚೆಂದಕ್ಕಗ ಒಳೇ ಮುಸುಮುಸುಗುಡೂ ಹರೇ ಏನ್ರಿ. ಊರೊಳಗ ತನ್ನ ವಾರಿಗೀ ಹುಡಿಗೇರಿಗೆಲ್ಲಾ ಮದಿವ್ಯಾಗಿ, ತಂತಮ್ಮ ಗಂಡಂದರ ಸಂಗತೀ ಅವರು ಬಾಳೇ ಮಾಡತಿರೋದನ್ನ ನೋಡತ್ತಿದ್ದಳು ಆ ಹೆಣ್ಣುಮಕ್ಕಳನ್ನೆಲ್ಲಾ ಜನಾ ಹ್ಯಾಂಗ ಮರೇದಿಂದ ನೋಡತಾರ— ಅಂಬೂದನ್ನ ಕಣ್ಣಾರೆ ಕಾಣತಿದ್ದಳು. ತಾನೂ ಅವರ್ಹಾಂಗ ಮದಿವೀ ಮಾಡಿಕೊಂಡು ಬಾಳೇ ಮಾಡಬೇಕಂಬೂದು ಆಕೀ ಮನಸಿನ ಹಂಬಲ. ಯಾವ ಹರೇದ ಗಂಡಸೂ ತನ್ನ ಕಡೆ, ಕಾಮದ ಕಣ್ಣಿಂದs ನೋಡಬಾರದೂ ಅಂತ ಆಕೀ ಆಶೇನ್ರಿ ! ಆದರ ಏನ ಮಾಡೋದು ? ಚೆಂದಾ ಹೇಳಿ ಕೇಳಿ ಜೋಗತಿರಿ; ಬೇಲಿ ಇಲ್ಲದ ಹೊಲಾ ಇದ್ಹಾಂಗ.... ಎಂತಾ ಬಿಡಾಡಿ ದನಕ್ಕೂ ಹೊಕ್ಕು ಮೇಯಾಕ ಮೋಕಳೀಕs ಅಲ್ರಿ ! ಇದರಿಂದ ಚೆಂದಾಗ ಬಾಳ ಕೆಟ್ಟ ಅನಿಸತ್ತು. ಆಗಾಗ ಉಸುರು ಹಾಕತಿದ್ದಳು. ಮ್ಯಾಲಿಂದ ಮ್ಯಾಲ ಕಣ್ಣೀರು ಸುರಸತಿದ್ದಳು. ದೇವರು ತನಗ ಹರೇನಾದರೂ ಯಾಕ ತಂದನೋ— ಅಂತ ಹಗಲೂ ರಾತ್ರಿ ಮಿಡಕತಿದ್ದಳು !....

ಇದs ಯಾಳೇದಾಗs, ಎರಡನೇ ಸರತಿ ಯುದ್ಧಕ್ಕ ಹ್ವಾದ ಹೆಬ್ಬುಲಿ ನಾಯಕ, ಗೆದ್ದು ಊರಿಗೆ ಬಂದ. ಊರ ಜನರೆಲ್ಲಾ ಹೋಗಿ ಎದುರುಗೊಂಡು, ಕುದರೀಮ್ಯಾಲೆ ಕೂಡಿಸಿ, ಮೆರವಣಿಗೀ ಮಾಡಿ ಕರಕೊಂಡು ಬಂದರು. ಚೆಂದಕ್ಕ ಇಲ್ಲೀ ತನಕಾ ಹೆಬ್ಬುಲಿ ನಾಯಕನ್ನ ನೋಡಿದ್ದಿಲ್ಲಾ ಅಂತ ಅಲ್ಲ. ಈಗ ನೋಡಿದಳು. ನೋಡಿದ ಚಣಕ್ಕ ಅಂದರ, ಆತನ ರೂಪ ಈಕೀ ಮನಸಿನ್ಯಾಗ ತುಂಬಿ ನಿಂತ್ಹಾಂಗ ಆತು. ಮೈಯಂತ ಮೈಯೆಲ್ಲಾ ಜುಮ್ ಜುಮ್ ಅಂದು, ಮೈಯಾಗ ಮುಂಗಾರಿ ಮಿಂಚು ಹರಿದಾಡಿದ್ಹಾಂಗ ಆತು. ಮೆರವಣಿಗಿ ತನ್ನ ಮನಿಮುಂದ ಬರುವಷ್ಟ್ರೊತ್ತಿಗೇನs ಆಕಿ ಒಳಗ ಓಡಿ ಹೋದಳು; ಹೋಗಿ ದೇವೀ ಮೈಮ್ಯಾಲಿರೂ ಹೂವಿನ ಮಾಲೀ ಒಂದು ತೊಗೊಂಡು ಬಂದಳು. ಮನೀ ಮುಂಗಟ್ಟೀ ಮ್ಯಾಲೆ ನಿಂತು, ಹೆಬ್ಬುಲಿನಾಯಕನ ತಲೀಮ್ಯಾಗ ಬೀಳೂಹಾಂಗ, ಆ ಹೂವಿನಮಾಲಿ ತೂರಿದಳು. ತೂರಿದ ಮಾಲಿ, ಹೆಬ್ಬುಲಿ ನಾಯಕನ ಬಲ ಹೆಗಲ

ಮ್ಯಾಲ ಬಿತ್ತು. ಮಾಲಿ ಬಂದ ನಿಟ್ಟಿಗೆ ಆತ ಮುಖಾ ಎತ್ತಿ ನೋಡಿದ: ರಂಭೀಯಂಥಾ ರೂಪದ ಹೆಣ್ಣೊಂದು ಅಲ್ಲಿ ನಿಂತಿತ್ತು. ಜೋಗತಿ ರೇಚಪ್ಪನ ಮನೀ ಅದು. ಈ ಚೆಲಿವಿಯೂ ಜೋಗತಿ ಅಂಬೂದು ಹೆಬ್ಬುಲಿಗೆ ಗೊತ್ತು. ಮೆರವಣಿಗೀ ಮರತು ಒಂದೆರಡು ಚಣಾ ಕುದರೀ ನಿಲ್ಲಿಸಿ, ಚೆಂದಾನ ಕಡೆ ನೋಡಿದ; ರೆಪ್ಪೀ ಉಲಕಸದ ನೋಡಿದ. ಕೂಡಿದ ಜನಾ ಎಲ್ಲಾ ಬೆರಗಾಗಿ, ತಮ್ಮ ಕಡೆ ನೋಡತಾರಂಬೂದರ ಅರವು ಇಬ್ಬರಿಗೂ ಇರಲಿಲ್ಲ. ಕುದರೀ ಮುಂದಿನ ಪಾಲೀಕಾರ, ಕಡಿವಾಣದಾಗ ಕೈಹಾಕಿ ಕುದರಿನ್ನ ಮುಂದಕ್ಕ ಜಗ್ಗಿದ. ಆಗ ಹೆಬ್ಬುಲಿ ನಾಯಕಗ ಎಚ್ಚರ ಬಂದ್ಹಾಂಗ ಆತು. ಹೆಗಲಮ್ಯಾಲೆ ಬಿದ್ದ ಮಾಲೀ ತಗದು ಕೊಳ್ಳಿಗೆ ಹಾಕಿಕೊಂಡ. ಚೆಂದಾ ಇದನೆಲ್ಲಾ ನಿಂತುಕೊಂಡು ನೋಡಿದಳು. ನಾಯಕ ಕೊಳ್ಳಿಗೆ ಮಾಲೀ ಹಾಕಿಕೊಂಡದ್ದನ್ನ ನೋಡಿ ಹಿಗ್ಗಿ ಹೀರೀಕಾಯಾದಳು. ಆದರ, ಮುಂದ ಮನಸಿನ್ಯಾಗ ಏನ ಇಚಾರ ಬಂತೋ ಏನೋ, ಮಾರೀ ಸಪ್ಪಗ ಮಾಡಿ ನಿಟ್ಟುಸುರು ಹಾಕಿದಳು. ಮೆಲ್ಲಗ ಹೆಜ್ಜೀ ಇಟಗೋತs ಒಳಗ ಹೋದಳು. ಮುಂದೆಲ್ಲಾ ಮೆರವಣಿಗೀ ಕುದುರೀ ಸಾಗಿಸಿಕೊಂಡು ಹೋದಾಂವ ಪಾಲೀಕಾರನs! ಹೆಬ್ಬುಲಿ ನಾಯಕನ ತಲೀತುಂಬಾ ಏನೇನೋ ಎಣಿಕಿ!

ಮರುದಿನ ಊರಾಗೆಲ್ಲಾ ಅದೊಂದs ಮಾತು: 'ಜೋಗತೀರ ಚಂದಾ, ಹೆಬ್ಬುಲಿ ನಾಯಕನ ಮ್ಯಾಗ ಹೂವಿನ ಮಾಲೀ ಹಾರಿಸಿದಳು' ಅಂತ, ಒಬ್ಬ ಹೆಣ್ಣುಮಗಳು ಅಂದಳು.

"ಹಾರಿಸಿದ್ಹಾಂಗಾದೀತು ಬಿಡs! ಹೇಳಿ ಕೇಳಿ ಜೋಗತಿ! ಎಲ್ಲಮ್ಮನ ಮುತ್ತನs ಕೊಳ್ಳಾಗ ಕಟ್ಟ್ಯಾಳ!"

ಇನ್ನೊಬ್ಬಾಕಿ ಮಾತಾಡಿದಳು:

"ಹೆಬ್ಬುಲಿ ನಾಯಕನಂತಾ ಬಂಟನ ಮ್ಯಾಗ ಹೂವಿನ ಮಾಲೀ ಹಾರಿಸಬೇಕಂತ ಯಾರಿಗೆ ಅನಿಸಲಿಕ್ಕಿಲ್ಲ? ಉಳಿದವರೆಲ್ಲಾ ಜನಕ್ಕ ನಾಚಿ-ಬಿಟ್ಟರು.... ಚೆಂದಾ ನಾಚಲಿಲ್ಲ.... ಇಷ್ಟs!"

ಮತ್ತೊಬ್ಬಾಕಿ ಹೇಳಿದಳಂತ:

"ನನ್ನ ಹೊಟ್ಟ್ಯಾಗ ಮಕ್ಕಳು ಹುಟ್ಟಿದರ, ಹೆಬ್ಬುಲಿ ನಾಯಕನಂತ-ವರs ಹುಟ್ಟಬೇಕು ನೋಡು!"

ಹೀಂಗs ಏನೇನೋ ಮಂದಿಯೊಳಗ ಮಾತು ಮಾಡಿ ಮಾಡಿ ಮರಿಯಾಗಿ ಹೋದ್ರೂ. ಆದರ, ಆಂದಿನ ಆ ಪರಸಂಗ ಚೆಂದಾಗೂ ಮರೀಲಿಲ್ಲ; ಹೆಬ್ಬುಲಿ ನಾಯಕಗೂ ಮರೀಲಿಲ್ಲ.

ಕಾಡನಾಯಕನ ಕಿಂವಿತನಕಾನೂ ಈ ಸುದ್ದಿ ಹೋಗದs ಇರಲಿಲ್ಲ. ಆಂವನೂ ಗಂಡು–ಹೆಣ್ಣಿನ ಮನಸಿನ ಹದಾ ತಿಳಿದಾಂವ. ಸದ್ಯ ಮಗನ್ನ ಒಬ್ಬಾತನ್ನs ಬಿಡಬಾರದೂ ಅಂತ ಎಣಿಕೀ ಹಾಕಿ, ತಾನೇ ಸ್ವತಾ ಹೋಗಿ, ಸೊಸಿನ್ನ ಮನಿಗೆ ಕರಕೊಂಡು ಬಂದ. ನೆರೆಹಳ್ಳಿಯ ನಾಗನಾಯಕರ ಮಗಳs ಹೆಬ್ಬುಲಿ ನಾಯಕನ ಹೇಣತಿ ! ‘ಚೆಂಗಲವ್ವ’ ಅಂತ ಆಕೀ ಹೆಸರು. ಚೆಂದಾನ ಮುಂದ ಚೆಂಗಲವ್ವನ ಚೆಲುವಿಕಿ ಏನೂ ಅಲ್ಲರಿ; ಹುಣಿವೀ ಚೆಂದಪ್ಪನ ಮುಂದ ತಾರಕ್ಕಿ ಮಿನಿಗಿದ್ಹಾಂಗ !

ಹೆಬ್ಬುಲಿ ನಾಯಕ ಓದಿದಾಂವ ಅಲ್ಲ, ಬರೆದಾಂವ ಅಲ್ಲ, ಸಾದೂನೂ ಅಲ್ಲ, ಸಂನ್ಯಾಸಿ ಆಗಬೇಕಂಬೂ ಲೆಕ್ಕದಾಂವಲ್ಲ. ಬ್ಯಾಡಾದ ವೈರಿನ್ನ ಎದುರಿಸ ಬೇಕನ್ನೂ ಬಂಟ; ಬೇಕಾದ ಚೆಲಿವಿನ್ನ ಆಳಬೇಕಂಬೂ ಬ್ಯಾಟಗಾರ. ಆತನ ಮನಸಿನ್ಯಾಗ ತುಂಬಿರೂ ಚೆಂದಾನ್ನ ಬದಿಗೆ ಸರಿಸಲಾಕ— ಚೆಂಗಲವ್ವನ ಕಡಿಂದೇನೂ ಸಾಧ್ಯೇವಾಗಲಿಲ್ಲ; ಗರತಿಯಾದ ಆ ಜಾಣಿ, ಗಂಡನ್ನ ತನ್ನ ಕಡೇನ ಒಲಿಸಿಕೊಳ್ಳಲಾಕ ಹಂಚಿಕೀ ಹರವು ಹಾಕದ ಇರತಾಳೇನ್ರಿ ?

ಹೆಬ್ಬುಲಿನಾಯಕ, ಹಾಂಗ— ಏನೇನೋ ನೆವಾ ಮಾಡಿಕೊಂಡು ರೇಣವ್ವನ ಮನೀ ಕಡೆ ಸುಳಿದಾಡಲಾಕ ಸುರೂ ಮಾಡಿದ. ರೇಣವ್ವಗ ಇದರ ಮರ್ಮ ಗೊತ್ತಾಗೋದು ಏನ ತಡಾ ? ಆವಳಿಗೂ ಹಿಂತಾದೊಂದು ಹಿರೀ ಬ್ಯಾಟಿ ಬೇಕಾಗೇ ಇತ್ತು. ಇಲ್ಲೀತನಕಾ ಚೆಂದಾ, ಯಾವ ಗಂಡ– ಸನ್ನೂ ಕಣ್ಣೆತ್ತಿ ನೋಡೂದಕ್ಕ ಒಪ್ಪತಿದ್ದಿಲ್ಲ. ಇದು ರೇಣವ್ವನ ಮನಸನ್ನ ಕುಚ್ಚತಿತ್ತು. ಮುಂದ ಏನ ಮಾಡಬೇಕೂ ಅಂಬೂದs ಆಕಿಗೆ ತಿಳೀದ್ಹಾಂಗ ಆಗಿತ್ತು. ಈಗ ಹೆಬ್ಬುಲಿನಾಯಕನ್ನ ಚೆಂದಾ ಮೆಚ್ಚೀದಾಳಂಬೂದನ್ನ ತಿಳಿದು, ಆಕೀ ಚಿಂತೆಲ್ಲಾ ಅಡಗಿ ಹೋತು. ಹೆಬ್ಬುಲಿನಾಯಕನ ಸಂದಾನಾ ನೋಡಿ, ರೇಣವ್ವ ಆತನ್ನ ಬಸಮಾಡಿಕೊಂಡಳು. ಚೆಂದಾ, ಹೆಬ್ಬುಲಿನಾಯಕ

ಇಬ್ಬರs ಇಬ್ಬರೂ ಕೂಡಿ ಇದ್ದೂಸಾಂಗ ಆಯುಷ್ಯ ಒಸಗಿಸಲಾಕಹತ್ತಿದಳು....

ಚೆಂದಾನ ರೀತಿ ಒಂದು ಮೋಜಿನ್ಯಾಗs ಏನ್ರಿ! ಹೆಬ್ಬುಲಿ ನಾಯಕನ್ನ ಬಯಕಿಗಣ್ಣಿನಿಂದ ನೋಡತಿದ್ದಳು. ಮನಸಿನಿಂದ ಅವನ ಪೂಜೇ ಮಾಡ-ತಿದ್ದಳು. ತನ್ನ ಹತ್ತೀಲೇನs ಅಂವ ಇರಬೇಕಂತ ಆಸೆ ಪಡತಿದ್ದಳು. ಆದರ ಏನಾಗಿ ಏನು? ಹೆಬ್ಬುಲಿ ನಾಯಕ ತನಗ ಗಂಡ ಅಲ್ಲ; ತಾ ಅಂವಗ ಹೇಣ್ತಿ ಅಲ್ಲ. ತಮ್ಮಿಬ್ಬರ ನಡಿವಿ ಆಗೂದಂತೂ ಎಂದೂ ಆಗದ ಮಾತು— ಇವೆಲ್ಲಾ ಸಂಗತಿ ಮನಸಿನ್ಯಾಗ ಬಂದು ಬಂದು, ಆಕೀ ಎದಿಗೆ ಕೆಂಜಗದ ಗುಂಪು ಕಚ್ಚಿದ್ಹಾಂಗ ಅನಿಸತಿತ್ತು. ಹುದಿಗಿಕೊಂಡು ದೂರಕ್ಕ ದೂರs ಇವ್ವ ಬಿಡತಿದ್ದಳು.

ಇತ್ತ ನಾಯಕರ ಮನ್ಯಾಗ, ಹೆಬ್ಬುಲಿಗೆ ಚೆಂಗಲವ್ವಗ ಬೆಟ್ಟೀನs ಇಲ್ಲ. ಬೆಟ್ಟಿ ಆದಾಗ ಮಾತು-ಕತೀ ಇಲ್ಲ. ಮಾತು-ಕತೀ ಆಡಿದರೂ ಆದರಾಗ ಏನೂ ರಸಾ ಇಲ್ಲ. ಚೆಂಗಲವ್ವ ಹಗಲು-ರಾತ್ರಿ ಕಣ್ಣೀರ-ಗರೀ-ತಿದ್ದಳು.

ಈ ಪರಕರಣದಾಗ ಯಾರಿಗೇನ ಸುಖಾ ಹೇಳರಿ! ಲೋಕದಾಗ ಗಂಡೂ-ಹೆಣ್ಣಿನ ಬದುಕೂ ಅಂದರ ಇಂತಾದs ಹೆಚ್ಚರಿ! ಮೂಗಿಗೆ ತುಪ್ಪ ಹತ್ತಿದ ಬೆಕ್ಕಿನ್ಹಾಂಗ ಹೆಬ್ಬುಲಿ ನಾಯಕ, ಬರೀ ಮಾರೀಮ್ಯಾಗ ಕೈಯಾ-ಡಿಸಿಗೊಂತs ಒಂದ ಕಡಿ ಕುಂತ. ಬೇಕಾದ ಬಾಗ್ಯೇವು ಬಾಗಿಲಿಗೆ ತಾನಾಗಿ ಬಂದಿದ್ದರೂ 'ಇದು ಕಳವಿನ ಮಾಲು. ನನಗ ದಕ್ಕದು' ಅಂತ ಬದಿಕಿನ ಮ್ಯಾಗ ಕಣ್ಣ ಇಟಗೊಂಡs ಮರಗಿಕೊಂತs ಚೆಂದಾ ಇನ್ನೊಂದು ಕಡೆ ಕುಂತಳು. ಸುಲಿಗಿ ಆದ ಮನೀ ಬಿರಿಸುಂತನ್ಹಾಂಗ— ಕೈಯಾಗಿದ್ದದ್ದು ಕಳಕೊಂಡು ಚೆಂಗಲವ್ವ, ಬಾಯಿ ಬಿಡತs ಮತ್ತೊಂದ ಕಡೆ ಕುಂತಳ್ರಿ! ಪರಪಂಚೇ ಇಂವ್ರ ಎಲ್ಲಾ ಮೋಜಿನ ಮಟ್ಟೇನ್ರಿ ರಾಯರs!

ಒಂದು ದಿನಾ ಏನು ನಡೀತು ಅಂತೀರಿ! ರೇಣವ್ವ ಏನೋ ಕೆಲಸ-ಕ್ಕಂತ ಬೇರೂರಿಗೆ ಹೋಗಿದ್ದಳು. ಚೆಂದಾ ಒಬ್ಬಾಕೀ ಮನ್ಯಾಗಿದ್ದಳೇನ್ರಿ! ನಾಕು ತಾಸು ರಾತ್ರಿ ಮೀರಿ ಹೋಗಿತ್ತೀತು. ಯಾರೋ ಮುಂಬಾಗಲಾ

ತಟ್ಟತಿದ್ಹಾಂಗ ಕೇಳಿಸಿತು. ಹೆಬ್ಬುಲಿ ನಾಯಕ ಬಂದಿರಬಹುದೂ ಅಂತ ಅನಿಸಿತು. ಮನ್ಯಾಗ ತಾ ಒಬ್ಬಾಕಿ! ಬಾಗಲಾ ತಗೀಬೇಕೋ ತಗೀ-ಬಾರದೋ.... ಅಂತ ಮನಸು ಜೋಕಾಲೀ ಆಡಿತು. ಆದರೂ ಕಡೀಕ ಬಂದು ಬಾಗಲಾ ತೆಗದು ನೋಡತಾಳ: ಹೆಬ್ಬುಲಿ ನಾಯಕ ಅಲ್ಲ; ಅವನ ಹೇಣತಿ ಚೆಂಗಲವ್ವ ಬಂದಿದ್ದಳು. ಚೆಂದಾ ಒಮ್ಮಿಗೇಲೇಽ ಬೆದರಿ ನಿಂತಳು. ಚೆಂಗ-ಲವ್ವ ಏನೂ ಮಾತನಾಡದನಽ ಚೆಂದಾನ ಕೈ ಹಿಡಕೊಂಡು, ಒಳಗ ಎಳ-ಕೊಂಡು ಹೋದವರ್ಹಾಂಗ ಕರೆದೊಯ್ದಳು.

ಒಳಗ ಹ್ವಾದ ಕೂಡಲೆ ಅಂದರ, ಚೆಂಗಲವ್ವ ಚೆಂದಾನ ಕಾಲಮ್ಯಾಗ ಬಿದ್ದು ಆಳಲಾಕ ಸುರೂ ಮಾಡಿದಳು! ಈಕಿ ಹೀಂಗ್ಯಾಕ ಮಾಡತಾಳ ಅಂಬೂದು ಚೆಂದಾಗ ತಿಳೀದ್ಹಾಂಗಾತು. ನಡಗತಿರೂ ದನೀಲೆ ಕೇಳಿದಳು:

“ಯಾಕ ತಾಯೀ! ಹೀಂಗ ಯಾಕೆವ್ವಾ! ಅಳತೀಯಾಕ? ಈಗ ರಾತ್ರ್ಯಾಗ ಇಲ್ಲಿಗಿ ಯಾಕ ಬಂದಿ?”

ಅಳತಾ ಅಳತಾನಽ ಚೆಂಗಲವ್ವ ಹೇಳಿದಳು:

“ಇಲ್ಲಿಗೆ ಬರದಽ ಇನ್ನೆಲ್ಲಿಗೆ ಹೋಗಬೇಕು ನಾನು? ನನ್ನ ಕೊಲ್ಲೂದೂ ಕಾಯೂದೂ ಎರಡೂ........... ನಿನ್ನ ಕೈಯಾಗಽ ಐತಿ, ಚೆಂದಕ್ಕಾ!”

“ಹೀಂಗ ಅಂದರ ಏನು ತಾಯೀ!”

ಆಕ್ಕಸದ ದನಿಯಿಂದ ಚೆಂಗಲವ್ವ ನುಡಿದಳು:

“ನಾನು ಗಂಡುಳ್ಳ ಗರತಿ. ನೀನು ಜೋಗತಿ! ನನ್ನ ಎದ್ಯಾಗಿನ ಕುದಿ ನಿನಗ ಹ್ಯಾಂಗ ಗೊತ್ತಾಗಬೇಕು? ಚೆಂದಕ್ಕಾ, ಇಲ್ಲಿ ಕೇಳು! ಈಗ ನಿಂದಽ ಮದಿವಿ ಆಗಿದ್ದು, ನಿನ್ನ ಗಂಡ ಇನ್ನೊಬ್ಬಾಕೀ ಬೆನ್ನ ಹತ್ತಿದ್ದರ, ನೀ ಏನ ಮಾಡತಿದ್ದಿ ಹೇಳು!”

ಒಂದ ತುಸಾ ತಡದು ನಿಂತು ಚೆಂದಾ ಹೇಳಿದಳು:

“ಯವ್ವಾ, ನೀ ಯಾತಕ್ಕ ಬಂದೀದಿ ಅಂಬೂದು ನನಗ ಗೊತ್ತ ಆದ್ಹಾಂಗ ಆತು! ನಾನದೇ ಏನ ಮಾಡ್ಲಿ, ನೀನಽ ಹೇಳು! ನಿನ್ನ ಗಂಡನ್ನ

ನಾ ಏನೂ ಕಟ್ಟಿ ಕಾಕಿಲ್ಲ ! ಅವರಿಗೆ ವ್ಯಾಗಿಂದ ವ್ಯಾಗ ನಾನು ಎಚ್ಚರಕೀ ಕೊಡತೀನಿ: ನಿಮ್ಮ ಮಾಡಿಕೊಂಡ ಹೇಣ್ತೀ ಜೋಡಿ ನೀವು ಸುಖದಿಂದ ಬಾಳೆ ಮಾಡಿಕೊಂಡ್ರಿ....ಅಂತ !"

"ಯಕ್ಕಾ, ಅವರು ಗಂಡಸರು, ಹೆಂಗಸರ ಎದೀ ಬ್ಯಾಗಿ ಏನಂಬೂದು ಆವರಿಗೆ ಹ್ಯಾಂಗ ಗೊತ್ತಾದೀತು ?"

"ಅವರಿಗೆ ಗೊತ್ತಾಗದಿದ್ದರ ಹೋಗಲಿ; ನಾ ಹೆಂಗಸಲ್ಲಾ ? ನನಗ ಗೊತ್ತಾಗೂದಿಲ್ಲೇನು ?"

ಚೆಂಗಲವ್ವ ತನ್ನ ಕೋಪಾನೆಲ್ಲಾ ಈಗ ಕಾರಿದಳು :

"ಹೌದವ್ವಾ, ನೀನೂ ಹೆಂಗಸು ! ಲೋಕದೊಳಗ ಸವತ್ಯಾರಂಜೊರೆಲ್ಲಾ ಹೆಂಗಸರs ಇರತಾರ !"

ಎದೀಗೆ ಪೆಟ್ಟು ಬಿದ್ದಾಂಗಾಗಿ ಚೆಂದಕ್ಕ ಒಂದು ಚಣ ತಡದ ನಿಂತು, ಆ ವ್ಯಾಗ ಮೆಲ್ಲಕ ಹೇಳಿದಳು :

"ನನ್ನ ನೀ ಸವತೀ ಅಂತ ತಿಳಕೋಬ್ಯಾಡ ತಾಯೀ ! ನಿನ್ನ ಅಕ್ಕ-ತಂಗ್ಯಾರ ಸರಿ—ಅಂತ ತಿಳಕೋಳವ್ವಾ !"

"ಯಾವ ಅಕ್ಕ-ತಂಗ್ಯಾರೂ ತಂತಮ್ಮ ಅಕ್ಕ-ತಂಗ್ಯಾರ ಬಾಳೇದ ವ್ಯಾಗ ನೀರ ಹನಿಸೂದಿಲ್ಲ—ಚೆಂದಕ್ಕಾ !"

ಸೊಲ್ಪ ಸುಮ್ಮಗಿದ್ದು ಚೆಂಗಾ ಕೇಳಿದಳು :

"ನಿನ್ನ ಸಲುವಾಗಿ ನನಗ ಏನ ಮಾಡಂತೀ ?"

"ಇನ್ನೇನೂ ಮಾಡೂದು ಬ್ಯಾಡ ! ನನ್ನ ಬಾಳೀಗೇಡು ಆಗದ್ಹಾಂಗ ಮಾಡು, ಇಷ್ಟs ಸಾಕು !"

"ಬಾಳೀಗೇಡು ಆಗದ್ಹಾಂಗ ನಾ ಏನ ಮಾಡಬೇಕು.... ?"

"ಏನ ಮಾಡಬೇಕಂದರ ಏನ ಹೇಳಲಿ ? ನೀ ಕಣ್ಣಮುಂದ ಇರೂ-ವರಿಗೂ ನಿನ್ನ ಹುಚ್ಚೇನೂ ಕಡಿಮಿ ಆಗೂದಿಲ್ಲ— ಅವರಿಗೆ !"

"ಹಾಂಗಾದರ ನಾ ಎಲ್ಲಿಗೆ ಹೋಗಲಿ ?"

"ಎಲ್ಲಿಗಾದರೂ ಹೋಗು, ಈ ಊರೊಳಗ ಮಾತ್ರ ಇರಬ್ಯಾಡ !"

“ನನ್ನ ದಸಿಂಗನs ಹುಚ್ಚು ಹಿಡಿದವರು, ನಾ ಊರ ಬಿಟ್ಟು ಹೋದರೂ ಹುಡುಕ್ಯಾs ಬೆನ್ನ ಹತ್ತವರs ಅಲ್ಲಾ ಯವ್ವಾ ?”

“ಹಾಂಗಾದರ ನಾ ಏನ ಮಾಡ್ಲಿ ಹೇಳು ! ಉರ್ಲ ಹಕ್ಕೊಂಡು ಸತ್ತು ಹೋಗಲ್ಯಾ” ಮಾತಿನ ಮುಗತಾಯದ ಕೂಡಾನs ಚೆಂಗಲವ್ವ ದೊಡ್ಡ ದನೀ ತಗದು ಅಳಲಾಕ ಹತ್ತಿದಳು. ಚೆಂದಾ ಆಕಿನ್ನ ಸಂತವಿಡತs ಹೇಳಿದಳು :

“ತಾಯೀ, ಅಳಬ್ಯಾಡ ! ನೀ ಚಿಂತೀ ಬಿಟ್ಟು ಹೋಗು; ನಿನ್ನ ಬಾಳೀ ಹೊಂದುಗೂಡೂಹಾಂಗ ನಾ ಮಾಡತೀನಿ !”

“ಇದರಂತೇ ನನಗ ವಚನಾ ಕೊಡತೀಯಾ ನೀನು ?”

“ಇದ ತೊಗೋ ವಚನಾ ! ಸತ್ಯ ಸತ್ಯ ಅಂದರೂ ಈ ಕೆಲಸಾ ನಾ ಮಾಡತೀನಿ !”

ಚೆಂದವ್ವ ಕೈಮ್ಯಾಗ ಕೈ ಹಾಕಿದಳು. ಚೆಂಗಲವ್ವ ಆಕೀ ಕಾಲ ಮುಟ್ಟಿ ನಮಸ್ಕಾರ ಮಾಡಿ, ಮನೀಗೆ ಹೊರಟುಹೋದಳು.

ಆ ಮ್ಯಾಗ ಚೆಂದಾ ಏನೇನೋ ಎಣಿಕೀ ಹಾಕತs ಕೂತಳು. ಒಮ್ಮೆ ಆಶೇ, ಇನ್ನೊಮ್ಮೆ ನಿರಾಶೇ. ಒಮ್ಮೆ ಒಳಗೊಳಗs ಅಳತಿದ್ದಳು. ಇನ್ನೊಮ್ಮೆ ಏನೇನೋ ಮನಸಿನ್ಯಾಗ ಗಟ್ಟಿಮಾಡತಿದ್ದಳು ಒಮ್ಮೊಮ್ಮೆ ಏನೂ ತಿಳೀ-ದವರ್ಹಾಂಗ ಕಂಗೆಟ್ಟು ಕೂತಬಿಡತಿದ್ದಳು. ಕಡೀಕ ಒಂದು ನಿರ್ಧಾರಕ್ಕ ಬಂದು ತನ್ನೊಳಗ ತಾನs ಮಾತಾಡಿದಳು :

“ನಾಳಿನ ದಿನಾನs ಮುದಿಕಿ ತಿರಿಗಿ ಬರತಾಳ. ಆಕಿ ಬರೂದರೊಳಗs ಎಲ್ಲಾ ಕೆಲಸಾ ಮುಗಿಸಿಬಿಡಬೇಕು !”

* * * *

ಆಯ್ತು ರಾಯರ ! ಮರದಿನಾ ಒಂದು ಗಳಿಗಿಹೊತ್ತು ಏರೂದ-ರೊಳಗs ಊರಾಗೆಲ್ಲಾ ಒಂದs ಮಾತು :

“ಜೋಗತಿ ಚೆಂದಾ, ಹಳ್ಳದ ದಂಡೀ ಆಲದ ಮರದ ಕೆಳಗ ಸತ್ತ ಬಿದ್ದಾಳು. ಮೈಯೆಲ್ಲಾ ಹಚ್ಚಗs ಹಸರಿಟ್ಟು ಹೋಗೇತಿ ! ಪಾಪ ಒಮ್ಮೆಲೆ ಹೀಂಗ್ಯಾಕ ಆತೋ ಏನೋ !”

ಊರ ಜನ ಹಿಂಡಹಿಂಡಾಗಿ ಅಲ್ಲಿಗೆ ಬಂತು. ಆಗೇನ್ರೀ, ಈಗಿನ ಹಾಂಗ ಇಂಗ್ರಜರ ರಾಜ್ಯಾಡೀ ಅಲ್ಲಾ ಏನಲ್ಲಾ! ಪ್ಯಾಗಂದ ಪೋಲೀಸರು ಬಂದು ಪಂಚನಾಮೇ–ಗಿಂಚನಾಮೇ ಮಾಡಬೇಕಾಗಿರಲಿಲ್ಲ. ಕಾಡನಾಯಕಾ ಅಂದರ ನಮ್ಮ ಹಳ್ಳಿಗೆ ಅರಸ ಇದ್ದಾಂಗ. ಅಂವ ಬಂದು 'ಇದು ಸರಿ!' ಅಂತ ಹೇಳಿದರ ಆತು; ಅದರಂತೇ ಊರ ಜನಾ ನಡೀತಿತ್ತು.

ಹೆಬ್ಬುಲಿ ನಾಯಕ ಬಂದು, ದೂರಽ ನಿಂತು ಚೆಂದಾನ ಹೆಣಾ ನೋಡಿದ. ಸೆಟೆದು ಬಿದ್ದುಕೊಂಡಿತ್ತು; ಮಾರೆಲ್ಲಾ ರಾವು ರಾವು ಆಗಿತ್ತು. ನೋಡಲಾಕ ಆಗಽನ ಬೆದರಿ ಅಲ್ಲಿಂದ ಹೊಂಟ ಹೋಗಿಬಿಟ್ಟ.

ನಾಯಕರ ಸೊಸೀ ಚೆಂಗಲವ್ವ ಅಲ್ಲಿಗೆ ಬಂದಳು. ಒಂದಽ ಸವನಽ ಕಣ್ಣೀರು ಸುರಿಸಿಗೋತಽ— ಹೆಣದ ಕಾಲಹಿಡಿದು ನಮಸ್ಕಾರ ಮಾಡಿದಳ್ರಿ. ಕುಂಕುಮಾ–ಅರಿಸಿಣಾ ಏರಿಸಿ, ಕೊಳ್ಳಿಗೆ ಹೂವಿನ ಮಾಲೀ ಹಾಕಿ ಪೂಜೀ ಮಾಡಿದಳ್ರೀ. ರೀತಿ ಪರಕಾರಾ ಮುಂದಿಂದೆಲ್ಲಾ ನಡೀತನ್ರಿ!

ಸೊಸೀ ಚೆಂಗಲವ್ವನ ಹೇಳಿಕೀ ಹಾಂಗ, ಕಾಡನಾಯಕ ಜೋಗ್ತಿ ಚೆಂದಾನ ನೆನಪಿಗೇ ಅಂತ, ಆ ಹೆಣಾ ಬಿದ್ದಲ್ಲೇನಽ ಒಂದು ಕಟ್ಟೀ ಕಟ್ಟಿಸಿದನಂತ. ಅದರ ಮ್ಯಾಗ ಆಕೀದೊಂದು ಮೂರ್ತಿ ಕಟೆಸಿ ಥಾಪನಾ ಮಾಡಿಸಿದನಂತ. ಚೆಂಗಲವ್ವನ ಕೈಬಿಟ್ಟುಹ್ವಾದ ಗಂಡ ತಿರಿಗಿ ಸಿಕ್ಕ— ಈ ಹಿಗ್ಗಿನಾಗ ಆಕಿ ವರಸಾ ವರಸಾ ಹೋಗಿ, ಆ ಕಲ್ಲಿನ ಪೂಜೀ ನಡಸತಿದ್ದಳಂತ. ದೊಡ್ಡವರ ಮಾಡಿದ್ಹಾಂಗ ಎಲ್ಲಾರೂ ಮಾಡೂದಽ ಅಲ್ರಿ! ನಾಯಕನ ಸೊಸೀ ಪೂಜೀ ಮಾಡೂದನ್ನ ಕಂಡು, ಊರಾಗಿನ ಎಲ್ಲಾ ಸೊಸೆಂದರೂ ಅಲ್ಲಿಗೆ ಹೋಗಿ ಪೂಜೀ ಮಾಡಲಾಕ ಹತ್ತಿದರಂತ. ಹಿಂದಿನವರ ಭಕ್ತಿ ಇಂದಿನ ಜನದಾಗ ಎಲ್ಲಿ ಉಳಿದೈತಿರಿ? ಆದರೂ ಅಂದಿನ ನಡಾವಳಿ ಇನ್ನಽ ಸೊಲ್ಪ ಉಳಕೊಂಡು ಬಂದೈತಿರಿ. ಯಾವ ಮನ್ಯಾಗಽ ಆಗಲಿ, ಮದಿವ್ಯಾಗಿ ಬಂದ ಮೊದಲಗಿತ್ಯಾರೆಲ್ಲಾ, ಬಂದ ದಿನಾನಽ ಅನ್ರಿ, ಮಾರಣೇದಿನಾ ಅನ್ರಿ; ಅಲ್ಲಿಗೆ ಹೋಗಿ ಪೂಜೀ ಮಾಡಿ ಬರಿಲಾಕಽ ಬೇಕ್ರಿ! ಇದಽ ಏನೈತಿ— ಜೋಗತೀ

ಕಲ್ಲಿನ ಕತೀನ್ರಿ ! ಒಬ್ಬರ ಸುಕದ ಸಲುವಾಗಿ ಇನ್ನೊಬ್ಬರು ಜೀವಾ ಕೊಡೂ-ದಂದರ, ಆವರು ಬರೇ ಮನಸ್ಯಾರಲ್ರಿ: ದೇವರs ಸರಿ ! ಚೆಂದಾ ಅಂದರ ಒಂದು ದೇವತಿ ! ”

ಇಷ್ಟು ಹೇಳಿ ಧರಮಣ್ಣ ಸುಮ್ಮನಾದ. ಆ ಹಳ್ಳಿಯ ಮುದುಕನ ನಿರೂಪಣಾ ಪದ್ಧತಿಯನ್ನೂ, ಅವನು ಮಾಡಿದ ದೇವರ ವ್ಯಾಖ್ಯೆಯನ್ನೂ ಕೇಳಿ, ನಾನು ಬೆರಗುಗೊಂಡುಹೋದೆ. ನನ್ನ ಆ ವೇದಾಂತದಲ್ಲಿಯ ‘ ಒಬ್ಬನೇ ದೈವದ ’ ಅಸ್ತಿತ್ವ, ಜೋಗತಿ ಚೆಂದಮ್ಮನಂತಹ ಬಹುಜನರ ಮನುಷ್ಯತ್ವದ ಮೇಲೆಯೇ ನಿಂತಿದೆಯೆಂಬುದನ್ನು, ಈ ಹಳ್ಳಿಯ ಕಲ್ಲಿನ ಕತೆಯಿಂದ ಚೆನ್ನಾಗಿ ಅರಿತುಕೊಂಡೆ.

# ಕಂಕಣದ ಕೈ

ನಮ್ಮ ಕನ್ನಡ ನಾಡಿನ ಇತಿಹಾಸ ಬರೆದಿಟ್ಟಿರುವುದಕ್ಕಿಂತ ಬರೆಯದೆ ಇರುವುದೇ ಹೆಚ್ಚಾಗಿ ಇದೆ. ಬರೆದಿಟ್ಟಿರುವ ಇತಿಹಾಸವೆಂದರೆ ಬರೀ ರಾಜ-ಸಮ್ರಾಜರ ವಂಶ-ನಾಮಗಳ ಅನುಕ್ರಮಣಿಕೆ: ಆ ಆ ರಾಜ-ಸಮ್ರಾಜರ ಕಾಲದಲ್ಲಿ ನಡೆದ ಯುದ್ಧ-ಗೊಂಬೆಗಳ ವಿವರಣೆ. ಇನ್ನೇನಾದರೂ ಬರೆದಿರಿಸಿದುದು ಇದೆಯೆಂದರೆ, ಅವೇ— ಆ ದಾನ-ದತ್ತಿಗಳ ಶಿಲಾಶಾಸನ-ತಾಮ್ರ-ಪಟಗಳು. ಕನ್ನಡಿಗರ ಮಾನವತೆಯ—ಸಾಮಾಜಿಕ—ವೈಯಕ್ತಿಕ ಜೀವನದ ವಿವರಣೆಗಳು ನಮಗೆ ಸಿಕ್ಕಬೇಕೆಂದರೆ, ಅದಕ್ಕಾಗಿ ನಾವು ಇನ್ನೂ ಬರೆಯದಿರುವ ನಮ್ಮ ಇತಿಹಾಸಕ್ಕೆ ಶರಣು ಹೋಗಬೇಕಾಗುವುದು. ಆದರೆ ಅದನ್ನು ಕಾಣುವುದಕ್ಕೆ ವಿಶಿಷ್ಟ ಪ್ರಕಾರದ ದೃಷ್ಟಿಗಳು ಬೇಕು; ಅದನ್ನು ಅರಿತುಕೊಳ್ಳುವುದಕ್ಕೆ ವಿಶಿಷ್ಟ ರೀತಿಯ ಬುದ್ಧಿ-ಮನಸ್ಸುಗಳು ಬೇಕು. ನಾನು ನಮ್ಮ ನಾಡಿನ ಇಂತಹ ಅಲಿಖಿತ ಇತಿಹಾಸದ ಪುಟಗಳು ಕೆಲವನ್ನು ಕಂಡು, ಓದಿ ಅರಿತು, ಹಿಗ್ಗು-ಹೆಮ್ಮೆಗಳಿಂದ ಬೀಗಿ, ಮಿಕ್ಕ ಜನಕ್ಕೂ ಗೊತ್ತಾಗಲೆಂದು ಅವನ್ನೀಗ ವಿವರಿಸಬೇಕೆಂದಿದ್ದೇನೆ. ತಿಳಿದುಕೊಳ್ಳ-ಬೇಕೆಂದು ಆಶೆಯಿಂದ ಹುಡುಕುವ ಸಂಸ್ಕೃತಿಯ ಅಭ್ಯಾಸಿಗಳಿಗೆ, ನಮ್ಮ ನಾಡಿನ ಮೂಲೆ-ಮೂಲೆಯಲ್ಲಿಯೂ, ಹಳ್ಳಿ-ಹಟ್ಟಿಗಳಲ್ಲಿಯೂ ಇಂತಹ ಬರೆಯದ ಇತಿಹಾಸದ ಪುಟಗಳು ಎಣಿಕೆ ಇಲ್ಲದಷ್ಟು ಸಿಕ್ಕಬಹುದು. ಬೆಳೆ ಹುಲುಸಾಗಿಯೆ ಇದೆ; ಆದರೆ ಒಕ್ಕುವ ಒಕ್ಕಲಿಗರ ಕೊರತೆ ನಮಗೆ ಬಾಧಕವಾಗಿದೆ.

ಶಾಲಿವಾಹನ ಶಕದ ೧೪೪೮ ನೆಯ ವರುಷ. ಆಗ ಬೆಳಗಾಂವಿಯ ಕೋಟೆ ವಿಜಯನಗರದ ನರಪತಿ ಕೃಷ್ಣರಾಯನ ಆಡಳಿತಕ್ಕೆ ಒಳಗಾಗಿತ್ತು. ನರಪತಿಗಳ ಪ್ರತಿನಿಧಿಯಾಗಿ, ಸಾಳುವ ತಿಮ್ಮನಾಯಕನು ಬೆಳಗಾಂವಿಯಲ್ಲಿ ಆಡಳಿತ ವಹಿಸಿದ್ದ.

ಬೆಳಗಾಂವಿಯ ಭದ್ರವಾದ ಕೋಟೆ ತುಂಬ ಆಯಕಟ್ಟಿನ ಸ್ಥಳ. ಆದುದರಿಂದಲೆ ಅದರ ಮೇಲೆ ಗೋವೆಯ ಪೋರ್ತುಗೀಜರದೂ ಕಣ್ಣು;

ವಿಜಾಪುರದ ಸುಲ್ತಾನರದೂ ಕಣ್ಣು. ಒಮ್ಮೆ ಪೋರ್ತುಗೀಜರು ದಾಳಿ-ಮಾಡುವರು; ಮತ್ತೊಮ್ಮೆ ಆದಿಲ್‌ಶಾಹಿ ಸರದಾರರು ದಾಳಿಮಾಡುವರು. ಆಗ ಬೆಳಗಾಂವಿಯ ನಾಡೆಂದರೆ ಕೇವಲ ಸಂಗ್ರಾಮಭೂಮಿಯಾಗಿತ್ತು. ಸಾಳುವ ತಿಮ್ಮನಾಯಕ ಉಕ್ಕಿನೆದೆಯ ಬಂಟ. ಪೋರ್ತುಗೀಜರನ್ನೂ ವಿಜಾಪುರದ ಸರದಾರರನ್ನೂ ಆಗಾಗ ಮಣ್ಣುಮುಕ್ಕಿಸುತ್ತಲಿದ್ದ. ಸುತ್ತು-ಮುತ್ತಣ ನಾಡುಗಳ ನಾಯಕರೂ, ಗಾವುಂಡರೂ—ಅಭಿಮಾನದಿಂದ—ಆವಶ್ಯಕತೆಯನ್ನರಿತು, ಸೈನ್ಯ ಸಹಾಯವನ್ನೂ, ಸಮರೋಪಕರಣಗಳನ್ನೂ ತಿಮ್ಮನಾಯಕನಿಗೆ ಒದಗಿಸುತ್ತಿದ್ದರು. ತಮ್ಮದಾದ ರಾಜ್ಯದ ಒಂದು ತುಂಡು ಭೂಮಿಯೂ ಪರಕೀಯರ ವಶವಾಗಬಾರದೆಂಬದು, ಅಂದಿನ ಕನ್ನಡ ನಾಡಿನ ಪ್ರತಿಯೊಂದು ಸ್ತ್ರೀ-ಪುರುಷ ವ್ಯಕ್ತಿಯ ಸಂಕಲ್ಪ; ಸಂಕಲ್ಪಕ್ಕೆ ತಕ್ಕಂತೆಯೇ ಸಾಹಸಜೀವನ. ಅಂದು ನಾಡಿನ ನೆರವಿಯಿಂದ ಉತ್ಸಾಹದ ಸಂಪತ್ತಿ ದೊರೆ-ಯದೆ ಹೋಗಿದ್ದರೆ, ಉತ್ತರದ ಗಡಿಯಲ್ಲಿ ವಿಜಯನಗರದ ಕನ್ನಡ ಆಡಳಿತಕ್ಕೆ ಆಸ್ಪದವೇ ಇರುತ್ತಿರಲಿಲ್ಲ.

ಈ ಕುದಿತದ ಕಾಲದಲ್ಲಿ, ಕುಂಚನೂರು ಒಂದು ಸಾಮಾನ್ಯ ಹಳ್ಳಿ. ಕೆಂಚೆಗೊಂಡ ಆ ಹಳ್ಳಿಗೆ ನಾಯಕ. ರಾಯಗೊಂಡ, ನಾಯಕನಿಗೆ ಒಬ್ಬನೆ ಒಬ್ಬ ಮಗ. ಮನೆಯಲ್ಲಿ ಬೇರಾವ ಹೆಣ್ಣು-ಗಂಡು ಮಕ್ಕಳೂ ಇರಲಿಲ್ಲ. ಕೆಂಚೆಗೊಂಡ ಆ ಹಳ್ಳಿಯ ಸರ್ವಾಧಿಪತಿ. ಮನೆಯಲ್ಲಿ ಸಿರಿ-ಸಂಪತ್ತಿಗೆ ಕೊರತೆಯಿಲ್ಲ. ರಾಯಗೊಂಡ ತಾಯಿ-ತಂದೆಗಳ ಮೋಹದ ಮಗುವಾಗಿ ಹಾಯಾಗಿ ಬೆಳೆದ. ತಾಯಿ ಲಕ್ಕಬ್ಬೆ ಮಗನನ್ನು ಗರಡಿಯಾಟಕ್ಕೆ ಬಿಡಲಿಲ್ಲ; ಕುದುರೆಯ ವೈಹಾಳಿಗೆ ಹೋಗಲು ಕೊಡಲಿಲ್ಲ. ಕತ್ತಿ-ಸುರಿಗೆಗಳನ್ನು ಕೈಯಿಂದ ಮುಟ್ಟಗೊಡಲಿಲ್ಲ. ಹಾಲು-ಸಕ್ಕರೆಯ ಸವಿಯೂಟ, ಕೆಲಸಕ್ಕೆ ಬಾರದ ಆಲೆದಾಟ. ಅಯ್ಯನವರು ಬಂದು ರಾಯಗೊಂಡನಿಗೆ ಬರೆಯೋದುಗಳನ್ನು ಕಲಿಸಲು ಹೆಣಗುತ್ತಿದ್ದರು. ಹದಿನೆಂಟು ವಯಸ್ಸಿನ ವರೆಗೆ ಕಲಿತರೂ ಅವನು, ತನ್ನ ಹೆಸರನ್ನು ಬರೆಯುವಾಗ 'ರಾಯಗೊಡ' ಎಂದೋ 'ರಾಯಗೊಡ್ಡ' ಎಂದೋ ಬರೆಯುವನು.

ಲಕ್ಕಬ್ಬೆ ತನ್ನ ಗಂಡನ ಅನುಮತಿಯನ್ನು ಪಡೆದು, ಅಣ್ಣನ ಮಗಳು ನಾಗಲಬ್ಬೆಯನ್ನು ಮಗನಿಗೆ ತಂದುಕೊಂಡಳು. ಮಗನನ್ನು ಮನುಷ್ಯ-

ನನ್ನಾಗಿ ನೂಕಬಲ್ಲ ಇನ್ನಾವ ಕಾರ್ಯವನ್ನೂ ಆ ತಾಯಿ ಮಾಡದೆ ಹೋದರೂ, ಮೊಮ್ಮಗನನ್ನು ಕಾಣಬೇಕೆಂಬ ಬಯಕೆಯಿಂದ, ಆವನನ್ನು ಒಬ್ಬ ಹೆಂಡತಿಯ ಗಂಡನನ್ನಾಗಿ ಮಾತ್ರ ಮಾಡಿದಳು. ಹಿರಿಯರ ಹೇಳಿಕೆಯಂತೆ ನಡೆಯಲೇಬೇಕಾಗಿದ್ದ ನಾಗಲಬ್ಬೆ, ಆ ಗಂಡನಿಗೆ ಹೆಂಡತಿಯಾಗಿ-ಬಿಟ್ಟಳು.

ಹೊಸ ಮೊದಲಗಿತ್ತಿಯಾಗಿ ಅತ್ತೆಯ ಮನೆಗೆ ಬಂದಾಗ, ನಾಗಲಬ್ಬೆಗೆ ಹದಿನೆಂಟು ವರ್ಷದ ವಯಸ್ಸು; ರಾಯಗೊಂಡನಿಗೆ ಇಪ್ಪತ್ತೊಂದರ ವಯಸ್ಸು. ನಾಗಲಬ್ಬೆ ನಾಲ್ಕು ಜನ ಅಣ್ಣ-ತಮ್ಮಂದಿರ ನಟ್ಟನಡುವೆ ಹುಟ್ಟಿದವಳು. ಆಕೆಯ ತವರೂರಾದ ನಾಗನೂರು, ಹಿರೆಹೊಳೆಯ ದಂಡೆಯ ಒಂದು ಹಿರಿಯೂರು. ಅಲ್ಲಿ ಹಿರಿಯ ಗಂಡುಸರೆಲ್ಲ ಕಾಳಗದ ಆಳುಗಳು; ಕಿರಿಯವರೆಲ್ಲ ಗರಡಿಯಾಳುಗಳು. ನಾಗಲಬ್ಬೆ ವೀರರ ಉತ್ಸಾಹದ ಗಾಳಿಯನ್ನೇ ಉಸಿರಾಡಿ ಸುತ್ತ ಬೆಳೆದವಳು. ಅಣ್ಣ-ತಮ್ಮಂದಿರ ಕೈಯಲ್ಲಿಯ ಕತ್ತಿ-ಭಲ್ಲೆಯಗಳನ್ನು ತೆಗೆದುಕೊಂಡು ತಾನೂ ತಿರುಹಿ ಆಡಿಸಿದವಳು. ಮನೆಯಲ್ಲಿಯ ಅರಬ್ಬೀ ಕುದುರೆಯನ್ನು ಹತ್ತಿ ಓಡಿಸಿ ದಣಿಸಿದವಳು. ಹಬ್ಬದ ಬೇಟೆಯ ಬೇಟೆಗಾರರ ಹುಮ್ಮಸವನ್ನು ಕಂಡು ಮೈ ಜುಮ್ಮೆನ್ನಿಸಿಕೊಂಡವಳು. ಕಾಳಗದಲ್ಲಿ ಗೆದ್ದಾಗಲಿ, ಬೇಟೆಯನ್ನಾಡಿಯಾಗಲಿ. ಮನೆಗೆ ಬಂದ ಅಣ್ಣ-ತಮ್ಮಂದಿರಿಗೆ ವಿಜಯದ ಆರತಿಯನ್ನೆತ್ತಿ ಹೆಮ್ಮೆಪಟ್ಟವಳು. ಈಗವಳು ಅತ್ತೆಯ ಮನೆಯ ಸೊಸೆಯಾಗಿ ಕುಂಚನೂರಿಗೆ ಬಂದಳು. ಇಲ್ಲಿಯ ಸುಕುಮಾರ ಭಾವಗಳು, ನಾಗಲಬ್ಬೆಯ ಹೃದಯವನ್ನು ಆಗಾಗ ಇರಿಯಲು ತೊಡಗಿದುವು.

ಕಣ್ಣು-ಮೂಗಿನಿಂದ ರಾಯಗೊಂಡ ಚೆಲುವನೆ. ನೆರಳಿನಲ್ಲಿಯೇ ಬೆಳೆದು ಬಂದ ಆವನ ಮೈಬಣ್ಣ ಬೆಳುಗೆಂಪಾಗಿಯೇ ಇತ್ತು. ಹೊಸಹರಯ, ಆವನ ಚೆಲುವಿಗೆ ಪುಟಕೊಟ್ಟಿದ್ದಿತು. ರೇಶಿಮೆದಡಿಯ ವಲ್ಲಿಯನ್ನು ಉಡುವ; ಮೆರುಗುಬಣ್ಣದ ಬಟ್ಟೆಯ ನಿಲುವಂಗಿ ತೊಡುವ. ತಲೆಗೆ ಜರದ ಚಿಮ್ಮುರಿಯ ಪೇಟಾ. ಕೊರಳಲ್ಲಿ ಯಾವಾಗಲೂ ಚಿನ್ನದ ಕಂಠಿ; ಎಡದ ಕೈಯಲ್ಲಿ ಚಿನ್ನದ ಕಡಗ. ಹಳ್ಳಿಯ ಹೊಸ ಹೆಣ್ಣುಗಳೆಲ್ಲ ಬಯಕೆಗಣ್ಣಿಂದ ಮತ್ತೆ ಮತ್ತೆ—ನೋಡುವಂತಿದ್ದಿತು ರಾಯಗೊಂಡನ ರೂಪು, ವೇಷ-ಭೂಷಣ; ಆದರೆ ಇವು-

ಗಳಲ್ಲಿಯ ಯಾವುದೊಂದೂ, ನಾಗಲಬ್ಬೆಯ ನೋಟಗಳನ್ನು ಸೆಳೆದುಕೊಳ್ಳಲಿಕ್ಕೆ ಸಮರ್ಥವಾಗಲಿಲ್ಲವೇನೋ !

ಕರುಳುಬಳ್ಳಿಯಲ್ಲಿಯ ಸೊಸೆ; ಆದುದರಿಂದ ಅತ್ತೆಯ ಕಾಟವಿಲ್ಲ. ಕಾಡಬಹುದಾದ ಅತ್ತಿಗೆ-ನಾದಿನಿಯರೂ ಮನೆಯಲ್ಲಿ ಇರಲಿಲ್ಲ. ರಾಯಗೊಂಡನಂತೂ ತನ್ನದೇನೆಲ್ಲವನ್ನೂ ಮುಡಿಪಾಗಿ ಕೊಡಲು ಸಿದ್ಧನಾಗಿದ್ದ. ಮನೆಯಲ್ಲಿ ತಿನ್ನಲಿಕ್ಕೆ ಕಡಮೆಯಿಲ್ಲ; ಉಣ್ಣಲಿಕ್ಕೆ ಕಡಮೆಯಿಲ್ಲ. ಇಷ್ಟೆಲ್ಲ ಇದ್ದರೂ, ನಾಗಲಬ್ಬೆಗೆ— ಅದೇಕೋ— ಬಾಳುವೆ ಬರಿದು ಬರಿದಾಗಿ ತೋರಲು ತೊಡಗಿತು. ರಾಯಗೊಂಡನನ್ನು ನೋಡಿದಾಗ, ಒಮ್ಮೊಮ್ಮೆ ಕೋಪ ಬರುತ್ತಿದ್ದಿತು; ಮತ್ತೆ ಒಮ್ಮೊಮ್ಮೆ ಮರುಕ ಮೂಡುತ್ತಿದ್ದಿತು.

ಹದಿನೆಂಟರ ಹರಯದ ನಾಗಲಬ್ಬೆಯ— ಹರಿದು ನಿಲ್ಲುವ— ಈ ಬಗೆಯು, ರಾಯಗೊಂಡನ ಮನಸ್ಸನ್ನು ಇನ್ನಿಷ್ಟು ಆತುರಕ್ಕೆ ಗುರಿಮಾಡತೊಡಗಿತು. ಆವಳ ಚೆಲುವನ್ನು ಕಣ್ಣು ತಣಿವ ತನಕ ನೋಡಬೇಕೆಂದರೆ, ಮುಖಕೊಟ್ಟು ಆಕೆ ಮುಂದೆ ನಿಲ್ಲುತ್ತಿರಲಿಲ್ಲ. ಸವಿಮಾತನಾಡಿದ ಧ್ವನಿಯನ್ನು ಕೇಳಬೇಕೆಂದರೆ, ಈತನೆದುರು ಆವಳು ಬಾಯನ್ನೆ ಬಿಚ್ಚುತ್ತಿರಲಿಲ್ಲ. ಒಲವು ಬೆರೆತ ಕುಡಿಗಣ್ಣ ನೋಟಗಳನ್ನು ತನ್ನೆಡೆಗೆ ಬೀರಬೇಕೆಂದು ಬಯಸುವನಾದರೆ, ಯಾವಾಗಲೂ ಕಾಣುವ ಅವಳ ಕೆಳಮೊಗ, ಈತನ ಹೃದಯದ ಮೇಲೆ ಏಟುಗಳನ್ನು ಹಾಕುವುದು.

ಬರುಬರುತ್ತ ರಾಯಗೊಂಡನ ಉಲ್ಲಾಸ ಉಡುಗಿತು. ದಿನದಿನಕ್ಕೆ ಆತ ಮೌನಿಯಾಗಲು ತೊಡಗಿದ. ತಾಯಿ-ತಂದೆಗಳು ಪ್ರೀತಿಯಿಂದ ಮಾತನಾಡಲು ಬಂದರೆ ಸಿಡಿಸಿಡಿ ಮಾಡಲಾರಂಭಿಸಿದ. ಮಗನ ನಡೆವಳಿಯಲ್ಲಿ, ಕೆಂಚಿಗೊಂಡನ ಲೌಕಿಕಬುದ್ಧಿ ವಿಶಿಷ್ಟವಾದ ಯಾವ ಮಾರ್ಪಾಡನ್ನೂ ಕಂಡುಹಿಡಿಯದೆ ಹೋದರೂ, ಲಕ್ಕಬ್ಬೆ ಸೂಕ್ಷ್ಮವಾಗಿ ಪರೀಕ್ಷಿಸತೊಡಗಿದಳು. ಎಕ್ಕಟಿಯಾಗಿ ಮಗನನ್ನು ಕರೆದು ಮಾತನಾಡಿ, ಆತನಿಂದಲೂ ಏನಾದರೂ ಸುದ್ದಿ-ಸಂಗತಿಗಳನ್ನು ಆಕೆ ಅರಿತುಕೊಂಡಿರಬಹುದು.

ಒಂದು ದಿನ ಯಾರೂ ಇಲ್ಲದಾಗ, ಲಕ್ಕಜ್ಜಿ ಸೊಸೆಯನ್ನು ಮುಂದೆ ಕುಳ್ಳಿರಿಸಿಕೊಂಡು, ಸಂಕೋಚಭಾವ ಜೀತ ಸ್ವರದಲ್ಲಿ ಮಾತನ್ನು ಆರಂಭಿ-ಸಿದಳು.

"ನಾಗಾ, ನೀ ನನ್ನೆದುರು ಸತ್ಯ ಮಾತಾಡತೀಯಾ ?"

"ನಾನು ಎಂದೂ ಸುಳ್ಳು ಆಡತಿರೂದಿಲ್ಲ ಅತ್ತೆಮ್ಮಾ !"

"ನನ್ನ ಆಣೀ ಮಾಡಿ ಸತ್ಯ ಮಾತು ಹೇಳತೀಯಾ !"

"ಈಗ ಆಣಿ-ಶಪತ ಯಾಕ ಬೇಕವ್ವಾ ! ನಾನು ಯಾವಾಗಲೂ ಸುಳ್ಳು ಮಾತನ್ನ ಬಳಸತಿರೂದಿಲ್ಲ."

"ಹಾಂಗಾದರ ನೀನs ಹೇಳು: ರಾಯಗೊಂಡ ಇತ್ತೀಚೆಗೆ ಹೀಂಗ ಯಾಕ ಆಗ್ಯಾನ ?"

"ಹೀಂಗ ಅಂದರ ಹ್ಯಾಂಗ ?"

"ಹ್ಯಾಂಗ— ಅಂತೇನ ಕೇಳತೀ ? ನಿನಗ ತಿಳಿಯೂದಿಲ್ಲೇನು ? ಇತ್ತೀಚೆಗೆ ರಾಯಗೊಂಡ ಚೆನ್ನಾಗಿ ನಗೂದಿಲ್ಲ; ಬಾಯಿಬಿಚ್ಚಿ ಮಾತಾಡೂ-ದಿಲ್ಲ; ಊಟದ ಕಡೆ ಮನಸ್ಸಿಲ್ಲ. ಉಡಿಗೀ ಕಡೆ ಲಕ್ಷ ಇಲ್ಲ !"

"ಇದೊಂದೂ ನನಗೆ ಗೊತ್ತಿಲ್ಲ, ಅತ್ತೆವ್ವಾ !"

"ನಾಗೂ, ಸುಳ್ಳಾಡುದಿಲ್ಲಾ ಅಂತ ಆಣೀ ಮಾಡೀದಿ ! ನೆನಪಿರಲಿ !"

ನಾಗಲಜ್ಜಿ ಕೆಳಗೆ ಮುಖ ಬಾಗಿಸಿಕೊಂಡು ಸುಮ್ಮಗೆ ಕುಳಿತಳು. ಒತ್ತರಿಸಿ ಬಂದಿದ್ದ ನಿಟ್ಟುಸಿರನ್ನು ತುಂಡು ತುಂಡಾಗಿ ಹೊರಕ್ಕೆ ಹಾಕುತ್ತಿ-ದ್ದಳು. ಮುಖದಲ್ಲಿ ನೆತ್ತರೇರಿತ್ತು. ಲಕ್ಕಜ್ಜಿ ಸೊಸೆಯ ಮುಖವನ್ನು ಮೇಲ-ಕ್ಕೆತ್ತಿ ಕಳವಳದ ಧ್ವನಿಯಲ್ಲಿ ಕೇಳಿದಳು :

"ನಿಜ ಹೇಳು; ನಿನ್ನ ಮನಸಿನ್ಯಾಗ ಏನದ ?....ಯಾಕ, ಹೇಳೂ-ದಿಲ್ಲೇನು ?"

ನಾಗಲಜ್ಜಿಯ ಕಣ್ಣಿಂದ ಕಂಬನಿ ಸುರಿದುವು. ಲಕ್ಕಜ್ಜಿ ಸೊಸೆಯ ತಲೆಯ ಮೇಲೆ ಮಮತೆಯ ಹಸ್ತವನ್ನಾಡಿಸುತ್ತಾ ಕೇಳಿದಳು :

"ನೋಡು ನಾಗಾ,....ರಾಯಗೊಂಡ ನಿನ್ನ....ಭಾಳ ಪ್ರೀತಿಂದs ನೋಡತಾನ !"

“ ಅದನ್ನ ನಾ ಬಲ್ಲೆ ಅತ್ತೆವ್ಮಾ....ಚೆನ್ನಾಗಿ ಬಲ್ಲೆ ! ”

ಲಕ್ಕಬ್ಬೆ ಆಶೆಯ ಧ್ವನಿಯಲ್ಲಿ ಕೇಳಿದಳು :

“ ನೀನೂ ಆತನ್ನ ಪ್ರೀತಿಸತೀಯಲ್ಲಾ ನಾಗಾ ? ”

“ ನನ್ನ ಕೈ ಹಿಡಿದವರು ಅವರು....ನನ್ನ ಜನ್ಮದ ಸಂಗಾತಿ ! ಅವರನ್ನಲ್ಲದೆ ನಾನು ಇನ್ಯಾರನ್ನ ಪ್ರೀತಿಸಬೇಕು ?....”

ಮತ್ತೆ ನಾಗಲಬ್ಬೆ ಮಾತನ್ನು ಮುಂದುವರಿಸಿದಳು :

“ ಆದರ........ಅತ್ತೆವ್ಮಾ........ನಿಜಾ ಹೇಳೂ ಅಂತೀದಿ ನೀನು ? ಅಂತಲೇ ಈಗ ಆ ನಿಜಾ ಅಂಬೂದನ್ನ ಹೇಳತೀನಿ....ಸಿಟ್ಟಿಗೆ ಮಾತ್ರ ಬರಬ್ಯಾಡ ! ”

“ ಸಿಟ್ಟಿಗ್ಯಾಕ ಬರತಾರ ನಾಗಾ ? ಇದ್ದದ್ದನ್ನ ಒಡದು ಹೇಳು ! ” ಆವೇಶದ ಧ್ವನಿಯಲ್ಲಿ ನಾಗಲಬ್ಬೆ ಹೇಳಲು ತೊಡಗಿದಳು :

“ ನೋಡು ಅತ್ತೆವ್ಮಾ....! ಅವರು ಗರಡಿಯಾಡಿ ಜಟ್ಟಿಯಾಗಬೇಕಂತ ನನಗೆ ಆಶೆ. ಗುರಿಯಿಟ್ಟು ಹೊಡಿಯೂ ಬ್ಯಾಟೆಗಾರರು ಆಗಬೇಕಂತ ಒಳ ಬಯಕೆ. ಕತ್ತೀ-ಭಾಲೀ ಹಿಡಿದು ಕಾಳಗದ ಬಂಟರಾಗಬೇಕೂ ಅಂತ ನನ್ನ ಇಚ್ಛಾ ! ಅವರು ಹೀಗೆಲ್ಲಾ ಆದಮೇಲೆ, ನನ್ನ ಪ್ರೀತಿ ಅವರಿಗೆ ತನ್ನ ಪೂಜೀ ಸಲ್ಲಿಸತೀನಿ—ಅಂತಿರದ ”

ಸೊಸೆಯ ಒಂದೊಂದು ಮಾತೂ ಲಕ್ಕಬ್ಬೆಯ ಕರುಳಲ್ಲಿ ಆಲಗಿಕ್ಕಿ ತಿರುಹಿದುವು. ನಾಗಲಬ್ಬೆ ತನ್ನ ಮಾತನ್ನು ಮುಗಿಸಿದರೂ, ಅದೆಷ್ಟೋ ಕಾಲದ ವರೆಗೆ ಲಕ್ಕಬ್ಬೆ— ಮಂಗಾಣದವಳಂತೆ ಸುಮ್ಮಗೆ ಕುಳಿತು-ಬಿಟ್ಟಿದ್ದಳು.

*　　*　　*　　*

ಇದ್ದುದಿದ್ದ ಹಾಗೆಯೇ ಯುಗಾದಿಯ ಪ್ರತಿಪದೆಯಿಂದ ರಾಯಗೊಂಡ ಗರಡಿಮನೆಗೆ ಹೋಗಲಾರಂಭಿಸಿದ. ಮೊದ-ಮೊದಲು ಅವನಿಗೆ ಇಪ್ಪಿಪ್ಪತ್ತು ದಂಡಾ-ಬೈಠಕಗಳನ್ನೂ ಹೊಡೆಯಲಿಕ್ಕೆ ಆಗುತ್ತಿರಲಿಲ್ಲ. ಒಂದು ಕೈಯಿಂದ ಲೋಡನ್ನು ಎತ್ತಿದರೆ, ಕೈ ತರತರಿಸುವುದು. ‘ ಮುದುಗಲ್ಲು ’ಗಳನ್ನು ಎತ್ತುವ ಕ್ರಮವನ್ನೂ ಪ್ರಾರಂಭಿಸಿ ಆಯಿತು. ಕೆಂಚೆಗೊಂಡ ಮಗನಿಗೆ ಸ್ವತಃ

ಕುದುರೆಯೇರಾಟ ಕಲಿಸಲು ತೊಡಗಿದ. ಕತ್ತಿ-ಭಲ್ಲೆಯಗಳ ವರಸೆ-ಪಟ್ಟು ಗಳನ್ನು ತಿಳಿಸಲು ಮೊದಲು ಮಾಡಿದ. ರಾಯಗೊಂಡನಲ್ಲಿ ಎಂದೂ ಕಾಣದ ಸಂಕಲ್ಪಸಿಷ್ಠೆ, ದೃಢನಿಶ್ಚಯ, ಕಷ್ಟಸಹಿಷ್ಣುತೆ, ಸಂಯಮಗಳು ತೋರಿ ಬಳೆಯಲಾರಂಭಿಸಿದುವು. ವ್ಯಾಯಾಮದ ಹಂಬಲು ಹೆಚ್ಚತೊಡಗಿತು.

* * * *

ರಾಯಗೊಂಡನ ರಟ್ಟೆಗಳ ಮೇಲೆ ಮಾಂಸಖಂಡಗಳ ಕುಕ್ಕಡಿಗಳು ಎದ್ದು ಕಾಣತೊಡಗಿದುವು. ತೋಳು-ತೊಡೆಗಳು ಗಟ್ಟಿಗೊಂಡು ಪುಷ್ಟವಾದುವು. ಎದೆಯು ಉಬ್ಬಿ ಅಗಲವಾಗತೊಡಗಿತು. ಮೈಬಣ್ಣ ನಸುಗೆಂಪಾಯಿತು. ಯಾವಾಗಲೂ ಒಳಗಣ್ಣೆದುರು ಕತ್ತಿ-ಸುರಿಗೆಗಳ ಪಟ್ಟು-ಹಿಡಿತ-ವರಸೆಗಳು ಕುಣಿಯುವುವು. ನಾಗಲಬ್ಬೆಯನ್ನು ಕಾಣಬೇಕೆಂದು ಹಂಬಲಿಸುತ್ತಿದ್ದ ಅವನ ಮನಸ್ಸು, ಈಗ ಅವಳನ್ನು ಮರೆತು ನಿಂತಿತು; ಸದಾ ಸರ್ವದಾ ಕುದುರೆಯೇ-ರಾಟ; ಬೇಟೆಯಾಟ; ಮಲ್ಲಗಾಳಿಗ; ಹುಸಿಗಾಳಗ!

ಕಾಲಚಕ್ರವು ಉರುಳಿ ತಲೆ ಕೆಳಗೆ ಮಾಡಿತ್ತು. ನಾಗಲಬ್ಬೆಯೀಗ ರಾಯಗೊಂಡನನ್ನು ಒಲವಿನ ಕಳ್ಳನೋಟದಿಂದ ನೋಡತೊಡಗಿದಳು. ಆತನ ಕಣ್ಣಿಗೆ ಕಾಣಬೇಕೆಂದು, ಬೇಕಾಗಿಯೇ ಅವನಿದ್ದಲ್ಲಿ ಸುಳಿದಾಡಲು ಮೊದಲು ಮಾಡಿದಳು. ಅವನ ಕಣ್ಣು-ಮನಗಳನ್ನು ಸೆಳೆಯಬೇಕೆಂದು, ಅಂದವಾಗಿ ಜಡೆ ಹೆಣೆದುಕೊಂಡು ಹೂಮುಡಿಯುವಳು. ಉಡಿಗೆ-ತೊಡೆಗೆ ಗಳಲ್ಲಿ ಬೆಡಗನ್ನು ತೋರಿಸಲಾರಂಭಿಸಿದಳು. ಈಗ ಇದೊಂದರ ಕಡೆಗೂ ರಾಯಗೊಂಡನ ಲಕ್ಷ್ಯವಿರಲಿಲ್ಲ; ಆದರೆ ಹೆಣ್ಣು ಮೆಚ್ಚಿ ಒಲವಿನ ಪೂಜೆಗೆ ಅಣಿಗೊಂಡು ನಿಂತಿರುವಾಗ, ಗಂಡು ಎಷ್ಟು ಕಾಲ ದೂರ ದೂರ ಸಿಡಿದು ನಿಂತೀತು? ಅಲ್ಲದೆ ನಾಗಲಬ್ಬೆ ರಾಯಗೊಂಡನಿಗೆ ಬೇಡವಾದ ಹೆಣ್ಣಲ್ಲ. ಇಷ್ಟೇ ಅಲ್ಲ; ಮಾಡಿಕೊಂಡ ಚೆಲುವೆಯಾದ ಹೆಂಡತಿ. ಇರುವುದು ಒಂದೆ ಎಡೆಯಲ್ಲಿ. ಯಾವುದೋ ಒಂದು ಅಮೃತಕ್ಷಣ ಇಬ್ಬರ ನೋಟಗಳನ್ನು ಒಂದುಗೂಡಿಸಿತು. ಪರಸ್ಪರ ಮನದ ಇಂಗಿತಾರ್ಥವನ್ನು ಬಿಚ್ಚಿಹೇಳಿತು. ಹೃದಯ ಹೃದಯಗಳನ್ನು ಒಲವಿನ ಎರಕದಿಂದ ಬೆಸೆದುಬಿಟ್ಟಿತು. ಈಗ ಮೊದಲಿನ ರಾಯಗೊಂಡನಲ್ಲ; ಮೊದಲಿನ ನಾಗಲಬ್ಬೆಯಲ್ಲ. ಮಗ-ಸೊಸೆ-

ಯರ ಈ ಹೊಸ ಅವತಾರಗಳು, ಕೆಂಚೆಗೊಂಡನ ಮನೆಯಲ್ಲಿ ಸಾಮರಸ್ಯದ ಸುಖ-ಸಂತೃಪ್ತಿಗಳನ್ನು ಹರಿದಾಡಿಸತೊಡಗಿದುವು.

*            *            *            *

ಮರುವರ್ಷದ ಯುಗಾದಿ ಕೆಂಚೆಗೊಂಡರ ವಂಶಾಭಿವೃದ್ಧಿಯ ಮುಂಗುರುತುಗಳನ್ನು ಹೊತ್ತುತಂದಿತ್ತು. ದೀವಳಿಗೆಗೆ ನಾಗಲಚ್ಚಿ ಚೊಚ್ಚಲು ಗಂಡುಸುಮಗನ ತಾಯಾಗಿ, ತವರುಮನೆಯಿಂದ ಅತ್ತೆಯ ಮನೆಗೆ ಬಂದಳು. ಈಗ ರಾಯಗೊಂಡನಿಗೆ ನೋಡಿ ಆನಂದಪಡಲಿಕ್ಕೆ ಎರಡು ಮುಖಗಳು: ಒಲವಿನಿಂದ ತುಂಬಿದ ಹೆಂಡತಿಯ ಮುಖ; ಇನ್ನೊಂದು ವಾತ್ಸಲ್ಯಕ್ಕೆ ಆಗರ ವಾದ ಮಗುವಿನ ಮುಖ.

ನರಕಚತುರ್ದಶಿಯ ಬೆಳಗಿನ ಆರತಿಯಾಯಿತು. ಅಂದೆಯೇ ಮಧ್ಯಾಹ್ನ ನಾಡ ಮನ್ನೆಯನ ಕಡೆಯಿಂದ ರಾಯಸವೊಂದನ್ನು ತೆಗೆದುಕೊಂಡು ದೂತ-ನೊಬ್ಬ ಹಳ್ಳಿಗೆ ಬಂದ.

ವಿಜಾಪುರದ ಸುಲ್ತಾನನ ಸರದಾರ ಅಸದ್‌ಖಾನನು, ದೊಡ್ಡ ಸೈನ್ಯ ದೊಂದಿಗೆ ಬೆಳಗಾಂವಿಯನ್ನು ಮುತ್ತಲು ಹೊರಟಿರುವನೆಂದೂ, ಆದಕ್ಕಾಗಿ ದೇಶದ ತರುಣರೆಲ್ಲ ಸೈನ್ಯಕ್ಕೆ ಸೇರಿ ಕನ್ನಡ ಸಿಂಹಾಸನದ ಅಚಲತೆಗಾಗಿ ಸಹಾಯ ಮಾಡಬೇಕೆಂದೂ, ಆ ರಾಯಸದಲ್ಲಿ ಅವಸರದ ಕರೆಯಿದ್ದಿತು. ಎಲ್ಲ ಹಳ್ಳಿಗೂ ಹೋಗಿರುವಂತೆ ರಾಯಸ ಇಲ್ಲಿಗೂ ಬಂದಿತ್ತು. ಊರಲ್ಲಿ ಸೈನಿಕ ರನ್ನು ಸೇರಿಸಿ ಕಳುಹುವ ಸಂದರ್ಭ ಕೆಂಚಗೊಂಡನಿಗೂ ಬಂದೊದಗಿತು. ಆಗ ರಾಯಗೊಂಡ ತಾನೂ ಕಾಳಗಕ್ಕೆ ಹೊರಡುವೆನೆಂದ. ಆದರೆ ಆತನಿಗೆ ಬೇಡವೆಂದು ಹೇಳುವವರು ಯಾರು? ತಾಯಿ ಲಕ್ಕಬ್ಬೆಗೆ ಈ ಮಾತು ಸಿಡಿಲೆರಗಿದಂತೆ ಎನಿಸಿತಾದರೂ, ಸೊಸೆಯ ಮುಖದ ಕಡೆಗೆ ನೋಡಿ ಸುಮ್ಮ-ನಿದ್ದುಬಿಟ್ಟಳು. ಕೆಂಚೆಗೊಂಡನಿಗೆ ಇದರ ವಿಚಾರ ಮಾಡಲು ಅವಕಾಶವೇ ಇರಲಿಲ್ಲ. ಅಲ್ಲದೆ ತನ್ನ ಮಗನಿಗೆ ಬೇಡವೆಂದು ಹೇಳಿದರೆ, ಇನ್ನೊಬ್ಬರ ಮಕ್ಕಳನ್ನು ಕಾಳೆಗಕ್ಕೆ ಕಳುಹುವ ಅಧಿಕಾರ ತನಗೆ ಎಲ್ಲಿಂದ ಬರಬೇಕು?— ಎಂಬ ವಿಚಾರ, ಆ ತಂದೆಯ ನಾಲಗೆಗೆ ತಡೆ ಹಾಕಿತು. ರಾಯಗೊಂಡ ಯುದ್ಧಕ್ಕೆ ಹೊರಟುನಿಂತುದು ಅವನ ಹೆಂಡತಿಗೆ ಒಮ್ಮೆ ಹಿಗ್ಗನ್ನು ಉಂಟು-

ಮಾಡುತ್ತಿದ್ದರೆ. ಇನ್ನೊಮ್ಮೆ ತಳಮಳವನ್ನು ಹುಟ್ಟಿಸುತ್ತಿತ್ತು. ಹೋಗೆನ್ನಲಿಕ್ಕೆ ಧೈರ್ಯವಿಲ್ಲ; ಬೇಡವೆನ್ನಲಿಕ್ಕೆ ಮನಸ್ಸೊಪ್ಪದು.

ನರಕಚತುರ್ದಶಿ ಕಳೆಯಿತು. ಅಮಾವಾಸ್ಯೆಯ ಕಗ್ಗತ್ತಲೆಯಿರುಳೂ ತೊಲಗಿ ಪ್ರತಿಪದೆಯ ಬೆಳಗು ಬಂದಿತು. ಅಂದು ಕುಂಚನೂರಿನ ನೂರು ಜನ ತರುಣರ ನಾಯಕನಾಗಿ ರಾಯಗೊಂಡನೂ ಕಾಳಗಕ್ಕೆ ಹೊರಟ. ಹಳ್ಳಿಯ ಸುಮಂಗಲಿಯರೆಲ್ಲ ಸೇರಿ ವೀರರ ಬಳಗಕ್ಕೆ ಆರತಿಯನ್ನೆತ್ತಿ, ಹಡಕೆಯ ಸೇಸೆಯಿಕ್ಕಿ ಸಂಭ್ರಮದಿಂದ ಬೀಳ್ಕೊಟ್ಟರು

ರಾಯಗೊಂಡ ಯುದ್ಧಕ್ಕೆ ಹೋಗುವಂತಾದ ಶ್ರೇಯಸ್ಸಿಗೆ ತಾನೇ ಕಾರಣಳೆಂದು ನಾಗಲಬ್ಬೆ ಹೆಮ್ಮೆಪಡುತ್ತಿದ್ದಳು. ಈ ಹೆಮ್ಮೆಯ ನಡುವೇ ಭೀತಿಯ ಮಿಂಚು ಸುಳಿದು, ಅವಳ ಎದೆಯನ್ನು ನಡುಗಿಸುತ್ತಿತ್ತು. ಹೀಗೆ ಭೀತಿಯ ಭರ ಹೆಚ್ಚಾದಾಗಲೆಲ್ಲ, ಆಕೆ ಮಗುವನ್ನು ತೊಡೆಯ ಮೇಲೆ ತೆಗೆದುಕೊಂಡು ಅದರ ಮುದ್ದುಮುದ್ದಾದ ಮುಖವನ್ನು ನೋಡುವ ಆನಂದದಲ್ಲಿ ಮೈಮರೆಯಲು ಯತ್ನಿಸುವಳು.

* * * *

ಗೋವೆಯ ಪೋರ್ತುಗೀಜ್ ಆಡಳಿತಾಧಿಕಾರಿಯು ವ್ಯಾಪಾರಲಾಭದ ಸಲುವಾಗಿ, ಸುಲ್ತಾನನ ಪಕ್ಷವನ್ನು ಬಿಟ್ಟು ವಿಜಯನಗರದ ನರಪತಿಯೊಂದಿಗೆ ಒಪ್ಪಂದ ಮಾಡಿಕೊಂಡುದರಿಂದ, ಸದ್ಯ ತಿಮ್ಮನಾಯಕನಿಗೆ ಪೋರ್ತುಗೀಜರ ದಾಳಿಯ ಭೀತಿ ತಪ್ಪಿದಂತಾಗಿತ್ತು. ಆದುದರಿಂದಲೇ ಅಸದ್‌ಖಾನನ ಬಹುಸಂಖ್ಯೆಯ ಸೈನ್ಯವು ಬೆಳಗಾವಿಯಿಂದ ಇನ್ನೂ ಹತ್ತು ಮೈಲು ದೂರದಲ್ಲಿರುವಾಗಲೇ, ನಾಯಕ ತನ್ನ ಸೈನ್ಯಸನ್ನಾಹದೊಂದಿಗೆ ಎದುರಿಸಿದನು. ಕನ್ನಡ ಸೈನಿಕರು ತುಂಬ ಅಭಿಮಾನದಿಂದ ಕಾದಾಟವನ್ನಾರಂಭಿಸಿದರು. ಸ್ವಜನಪ್ರೀತಿಯಿಂದ, ನಾಡ ಜನತೆ ಬೇಕಾದ ಸಲಕರಣೆಗಳನ್ನೆಲ್ಲ ಕಾಲಕಾಲಕ್ಕೆ ಒದಗಿಸತೊಡಗಿತು. ನಿಕರದ ಯುದ್ಧ ನಡೆಯಿತು. ಎರಡು ಪಕ್ಷಗಳಲ್ಲಿಯೂ ನೆತ್ತರಿನ ಓಕುಳಿಯಾಟವಾಯಿತು.

ಕನ್ನಡವೀರರ ಕಡುಪನ್ನು ತಡೆಯಲಾರದೆಯೂ, ಪ್ರಾದೇಶಿಕ ಜನರ ಅಸಹಕಾರದ ಮೂಲಕವೂ, ವೈರಿಯ ಸೈನ್ಯ ಕಂಗೆಟ್ಟುಹೋಯಿತು. ಚೆದರಿ ಚೆಲ್ಲಾಪಿಲ್ಲಿಯಾಯಿತು.

ಇದೆಲ್ಲ ಯುದ್ಧದ ಸುದ್ದಿ ಒಂದಕ್ಕೆರಡಾಗಿ, ಉಪ್ಪುಕಾರ ಹಚ್ಚಿಕೊಂಡು ನಾಡು-ನಾಡುಗಳಲ್ಲಿ ಹಬ್ಬಿ ಹರಡಿ, ಜನತೆಯ ಆತ್ಮವಿಶ್ವಾಸವನ್ನು ಇಮ್ಮಡಿ-ಗೊಳಿಸುತ್ತಿತ್ತು. ಕುಂಚನೂರಿಂದ ಹೋದ ವೀರರೂ ಜೀವದ ಹರವೆಯಿಲ್ಲದಂತೆ ಕಾಳೆಗದಲ್ಲಿ ನುಗ್ಗಿ ನಡೆದಿದ್ದಾರೆಂಬ ಸಂಗತಿ, ಆ ಊರ ಜನರ ಹೃದಯವನ್ನು ಅಭಿಮಾನದಿಂದ ತುಂಬುತ್ತಿತ್ತು. ರಾಯಗೊಂಡ ಜಯಶಾಲಿಯಾಗಿ ಬಂದಾಗ, ಅವನೊಂದಿಗೆ ತಾನು ಹೇಗೆ ನಡೆದುಕೊಳ್ಳಬೇಕೆಂಬುದನ್ನೂ ತನ್ನ ವೀರಪತ್ನೀತ್ವದ ಪದವಿಯನ್ನೂ ಭಾವಿಸಿ, ನಾಗಲಬ್ಬೆ ಹಿಗ್ಗುತ್ತಿದ್ದಳು. ಹಿಗ್ಗಿನ ಭರದಲ್ಲಿ ಕೂಸನ್ನೆತ್ತಿಕೊಂಡು ಎಡೆಬಿಡದೆ ಮುತ್ತಿಡುವಳು.

ಅಸದ್‌ಖಾನನ ಸೈನ್ಯ ಸೋತು ಕಂಗೆಟ್ಟು ಓಡಿಹೋಯಿತೆಂಬ ಸುದ್ದಿ ನಾಡಿನಲ್ಲೆಲ್ಲ ಹಬ್ಬಿತು. ಕಾಳಗ ನಡೆದಲ್ಲಿ ನೆತ್ತರು ಹರಿದು ಕೆಸರು-ಕೆಸರಾಯಿತು. ಹದ್ದು-ಕಾಗೆಗಳಿಗೆ ಹಬ್ಬ ಹಾಕಿದಂತಾಯಿತು. ಯುದ್ಧವೆಂದ ಮೇಲೆ, ಗೆದ್ದ ಪಕ್ಷದವರಲ್ಲಿಯೂ ಸಾವು-ನೋವುಗಳಾಗುವುವು; ಸೋತ ಪಕ್ಷದಲ್ಲಿಯೂ ಸಾವು-ನೋವುಗಳಾಗುವುವು. ದೇಶದಲ್ಲಿ ಎರಡೂ ಪಕ್ಷದ ಜನತೆಯೂ ಯುದ್ಧದ ದುಷ್ಪರಿಣಾಮಗಳನ್ನು ಅನುಭವಿಸುತ್ತಿರುವುದು.

ಯುದ್ಧ ನಿಂತ ಸುದ್ದಿ ಕುಂಚನೂರಿಗೂ ತಲ್ಪಿತು. ಯುದ್ಧಕ್ಕೆ ಹೋದ ಬಂಟರ ಮನೆ–ಮನೆಗಳಲ್ಲಿಯೂ ಅವರನ್ನು ಸಂಭ್ರಮದಿಂದ ಸ್ವಾಗತಿಸುವ ಮಾತು-ಕತೆಗಳು ನಡೆಯತೊಡಗಿದುವು. ಕೆಂಚೆಗೌಡನಿಗೆ ಸಮಾಧಾನ; ಸಂತೃಪ್ತಿ. ಲಕ್ಕಬ್ಬೆಗಂತೂ, ಮಗನ ಮುಖವನ್ನು ಯಾವಾಗ ಕಂಡೇನೆಂಬ ಆತುರ, ಕ್ಷಣಗಳನ್ನು ದಿನಗಳನ್ನಾಗಿಸುತ್ತಿತ್ತು. ನಾಗಲಬ್ಬೆಗೆ ಸ್ವರ್ಗ ಮೂರೇ ಬೆರಳು ಉಳಿದಂತಾಗಿತ್ತು. ತಾನು ವಿಜಯಶಾಲಿಯಾದ ವೀರನ ಪತ್ನಿಯೆಂಬ ಅಹಂಕಾರ, ಹೃದಯದಲ್ಲಿ ಹಿಡಿಸದಂತಾಗಿತ್ತು.

ಮಾರ್ಗಶೀರ್ಷ ಶುದ್ಧ ಷಷ್ಠಿ. ಗೌಡರ ಮನೆಯಲ್ಲಿ ಕುಲದೈವತವಾದ ಮಲ್ಲಾರಿ-ಮಾರ್ತಾಂಡನ ನವರಾತ್ರಿ ನಡೆದು, ಅಂದು ಹಬ್ಬದ ಕೊನೆಯ ದಿನವಾಗಿದ್ದಿತು. ಮನೆತುಂಬ 'ವಗ್ಗಯ್ಯ'ಗಳ ಗುಂಪು ಗಜಬಜಿಸುತ್ತಿದ್ದಿತು. ಹೋಳಿಗೆ-ಹುಗ್ಗಿ ಮಾಡಿ, ನೈವೇದ್ಯವನ್ನು 'ಡೋಣಿ ತುಂಬಿಸುವ' ಸಮಾ-ರಂಭ ಉತ್ಸಾಹದಿಂದ ಸಾಗಿದ್ದಿತು. ಆಗಲೆ ನಾಡಮುನ್ನೆಯನ ದೂತನೊಬ್ಬ

ರಾಯಸ ತೆಗೆದುಕೊಂಡು ಬಂದ. ಕೆಂಚಿಗೊಂಡ ಇದನ್ನು ಕೇಳಿ, ಆತುರ-ದಿಂದಲೆ ಹೊರಗೆ ಬಂದು, ರಾಯಸದಾಳನ್ನು ಬರಮಾಡಿಕೊಂಡ: ಓಲೆಯನ್ನು ಓದಿಸಿ ಕೇಳಿಕೊಂಡ :

" ಶ್ರೀಸಂಸಾಪಿರೂಪಾಕ್ಷನ ದಯೆಯಿಂದ ವೈರಿಯನ್ನು ಹಿಮ್ಮೆಟ್ಟಿಸ-ಲಾಯಿತು ಈ ಮಹಾಕಾರ್ಯದಲ್ಲಿ ತಮ್ಮ ಹಳ್ಳಿಯ ಬಂಟರೂ ತಕ್ಕ ಸಹಕಾರವನ್ನು ಸಲ್ಲಿಸಿದುದಕ್ಕಾಗಿ ತುಂಬ ಸಂತೋಷವಾಗಿದೆ. ರಾಯಗೊಂಡ ನೆಂಬ ತರುಣವೀರನ ಗಂಡುಗಲಿತನವಂತೂ ಅಸಮಾನವಾದುದು. ಆ ದುಡುಕಿನ ಬಂಟ, ಗಂಡಾಂತರದಲ್ಲಿ ಒಬ್ಬನೆ ಮುಂದೆ ನುಗ್ಗಿ, ನೂರಾರು ವೈರಿ ಸೈನಿಕ ರನ್ನು ಚೆಂಡಾಡಿದ; ಆದರೆ ವಿಷಾದದ ಮಾತು : ಕಾಳಗದ ಮದದಿಂದ ಮೈಮರೆದ ಆ ವೀರನನ್ನು, ವೈರಿಗಳು ಹಿಂದಿನಿಂದ ಬಂದು ಎರಗಿ ಇರಿದು ಕೊಂದರು........"

ಕೊನೆಯ ಮಾತನ್ನು ಕೇಳಿದ ಕೆಂಚಿಗೊಂಡ, ನಿಂತಿದ್ದಂತೆಯೆ ಕುಸಿದು ಕೆಳಕ್ಕೆ ಕುಳಿತ. ಮುಂದಿನ ಪತ್ರ ಓದಿಸಿ ಕೇಳಬೇಕೆಂಬ ಎಚ್ಚರವೇ ಅವನಿಗೆ ಉಳಿಯಲಿಲ್ಲ. ಕಂಬನಿ ತಾನಾಗಿಯೆ ಹರಿಯತೊಡಗಿದುವು. ತಾನು ಎಲ್ಲಿ ಹೇಗೆ ಇರುವೆನೆಂಬುದನ್ನೂ ಮರೆತು ಆ ಮುದುಕ ' ಅಯ್ಯೋ !.... ರಾಯ-ಗೊಂಡಾ !............ನನ್ನ ಮಗನೇ ! ' ಎಂದು ಎದೆ ಬಿರಿಯುವಂತೆ ಹೊಡೆದು ಕೊಂಡು ಅಳತೊಡಗಿದ.

ಕ್ಷಣದಲ್ಲಿಯೆ ಸುದ್ದಿ ಎಲ್ಲೆಲ್ಲಿಯೂ ಹರಿಯಿತು. ಹಬ್ಬದ ಸಂಭ್ರಮ ದಿಂದ ತುಂಬಿದ್ದ ಗೌಡರ ಮನೆ ಅಳುವಿನ ಆಗರವಾಯಿತು. ಲಕ್ಕಬ್ಬೆ ಇದ್ದುದಿದ್ದಂತೆಯೇ ' ಅಯ್ಯೋ ಮಗನೆ ! ' ಎಂದು ಚೀರಿ ನೆಲಕ್ಕೆ ಬಿದ್ದು ಅಳಲುತೊಡಗಿದಳು. ನಾಗಲಬ್ಬೆಯ ಹೃದಯಕ್ಕೆ ಬರಸಿಡಿಲು ಬಿಡಿ-ದಂತಾಯಿತು. ಆದರೂ ಆ ಆಘಾತವನ್ನು ತಡೆದುಕೊಂಡಳು. ಸಂತಾ-ಪಾಗ್ನಿ ಅವಳ ಕಂಬನಿಯನ್ನು ಆಟ್ಟಿಸಿಬಿಟ್ಟಿತು. ಗಂಡನ ವೀರಮರಣ, ಅವಳಲ್ಲಿ ಒಂದು ಬಗೆಯ ಆವೇಶವನ್ನು ತುಂಬಿತು. ಅತ್ತೆ-ಮಾವಂದಿರ ಬಳಿಗೆ ಹೋಗಿ ಅವಳು ನಾನಾಬಗೆಯಿಂದ ಸಮಾಧಾನಪಡಿಸಲು ತೊಡಗಿ-ದಳು. ಗಂಡನ ಸಾವಿಗಾಗಿ ಅಳದೆ ಇರುವ ನಾಗಲಬ್ಬೆಯನ್ನು ಕಂಡ ಊರ ಜನರು, ತುಂಬ ಆಶ್ಚರ್ಯಪಟ್ಟರು. ವಿಕೃತಮನದ ಕೆಲವು ಹಳ್ಳಿಗರಂತೂ

ವಿಚಿತ್ರ-ವಿಚಿತ್ರದ ಕುತರ್ಕಗಳನ್ನೂ ಮಾಡಲಾರಂಭಿಸಿದರು. ನಾಗಲಬ್ಬೆಗೆ ಇದೊಂದರ ಪರವೆಯೂ ಇರಲಿಲ್ಲ.

* * * *

ರಾಯಗೊಂಡನ ಸಾವಿನ ವರ್ತಮಾನ ಬಂದು ಇಂದಿಗೆ ಐದು ದಿನ-ಗಳಾದುವು. ಮಾತನಾಡಿಸಲಿಕ್ಕೆ ಬಂದ ಬಂಧು-ಬಾಂಧವರಿಂದ ಗೌಡರ ಮನೆ ಗಜಿಬಜಿಸುತ್ತಲಿದೆ. ನಾಗಲಬ್ಬೆಯ ತಂದೆ-ಅಣ್ಣ-ತಮ್ಮಂದಿರೂ ಬಂದಿ-ದ್ದರು. ಯಾರು ಎಷ್ಟೆಷ್ಟು ರೀತಿಯಿಂದ ಹೇಳಿದರೂ ನಾಗಲಬ್ಬೆ ಸತಿಹೋಗು-ವೆನೆಂಬ ತನ್ನ ಸಂಕಲ್ಪದಿಂದ ಕದಲಲೊಲ್ಲಳು. ಮನೆಯಲ್ಲಿ ಅಳುವಿನ ಹೊಳೆಗೆ ನೆರೆಬಂದಂತಾಗಿದ್ದರೂ, ನಾಗಲಬ್ಬೆ ಸಮುದ್ರದಂತೆ ಶಾಂತ-ಗಂಭೀರಭಾವದಿಂದ ಇರುತ್ತಿದ್ದಳು.

ತಂದೆ ಬೇಡವೆಂದು ಪರಿಪರಿಯಿಂದ ಮನಸ್ಸೊಲಿಸಿದ. ಅಣ್ಣ-ತಮ್ಮಂದಿರು ಬಂದು ಅಲ್ಪರೆದು ಹೇಳಿಕೊಂಡರು. ಅತ್ತೆ ಅತ್ತು-ಕರೆದು ಕಳವಳದಿಂದ ಬೇಡಿಕೊಂಡಳು. ಮಾವ ಬಂದು ಬಿಗಿದ ಕೊರಳಿನ ಮಾತುಗಳಿಂದ— ಸುರಿವ ಕಂಬನಿಗಳಿಂದ— ಬಿನ್ನಹದ ರೀತಿಯಲ್ಲಿ ಬೇಡವೆಂದು ಹೇಳಿದ. 'ಮಗುವು ಚಿಕ್ಕದು ! ಮಕ್ಕಳಿಗಾಗಿ ಕುಂತೀದೇವಿ ಕೂಡ ಬದುಕಿ ಉಳಿ-ದಳು !' ಎಂದು ಬಂಧುವರ್ಗವೆಲ್ಲ ಉಪದೇಶಿಸಿತು. ತನ್ನ ಕರ್ತವ್ಯವಾವು-ದೆಂದು ನಿರ್ಣಯಿಸಿ ಬಿಟ್ಟಿದ್ದ ನಾಗಲಬ್ಬೆ, ಯಾರ ಬೇಡಿಕೆ-ಬಿನ್ನಹ-ಉಪ-ದೇಶಗಳನ್ನೂ ಎಣಿಕೆಗೆ ತರಲಿಲ್ಲ; ಸತಿಹೋಗುವೆನೆಂಬ ತನ್ನ ಸಂಕಲ್ಪವನ್ನು ಬದಲಿಸಲು ಸಮ್ಮತಿಯನ್ನು ಕೊಡಲಿಲ್ಲ. ಆಚಾರಧರ್ಮವನ್ನು ಪಾಲಿಸಲು ಸಿದ್ಧರಾದವರನ್ನು, ಸಾಂಪ್ರದಾಯಿಕ ಬುದ್ಧಿಯವರು ಬೇಡವೆಂದು ಬಲುಮೆ ಪಡಿಸುವುದು ಎಲ್ಲಿಯ ವರೆಗೆ ? ಎಲ್ಲರೂ ನಿರುಪಾಯರಾಗಿ ಸುಮ್ಮನಾದರು.

* * * *

ಹಳ್ಳಿಯ ತೆಂಕಣ ಭಾಗದ ರುದ್ರಭೂಮಿಯಲ್ಲಿ, ಸತಿಗಾಗಿ ಚಿತೆಯ ಸಿದ್ಧತೆ ನಡೆದಿದೆ. ಸುದ್ದಿ ತಿಳಿದ ಆ ಭಾಗದ ಜನರೆಲ್ಲ—ಹುಡುಗರು ಮುದುಕರು ಎನ್ನದೆ— ಬಂದು, ನೆರವಿ-ನೆರವಿಯಾಗಿ ಸುತ್ತುಗಟ್ಟಿ ನಿಂತಿ-

ದ್ದಾರೆ. ಎಲ್ಲೆಲ್ಲಿಯೂ ಗುಣುಗುಣು ಗಜಿಬಿಜಿ. ಬೀಸುವ ಸುಳಿಗಾಳಿ-ಯೊಂದಿಗೆ ಕಳವಳ-ತಳಮಳ ಭಾವವೇ ವಾತಾವರಣದಲ್ಲೆಲ್ಲ ಹರಡುತ್ತಲಿದೆ. ಚಿತೆಗೆ ಸಮೀಪವಾಗಿ ನೂರಾರು ಜನ ಸುಮಂಗಲೆಯರು, ಸತಿಯ ಕೊನೆಯ ದರ್ಶನಕ್ಕಾಗಿ ಕುತೂಹಲಿಗಳಾಗಿ ನಿಂತಿದ್ದಾರೆ.

ರುದ್ರವಾದ್ಯಗಳ ರಭಸದೊಂದಿಗೆ ನಾಗಲಬ್ಬೆ, ಬಂಧುಬಳಗಗಳ ಮಧ್ಯದಲ್ಲಿ, ಸತೀವಸ್ತ್ರ-ಭೂಷಣಧಾರಿಣಿಯಾಗಿ, ಮೆಲುನಡಿಗೆಯಿಂದ ನಡೆಯುತ್ತ ಅಲ್ಲಿಗೆ ಬಂದಳು. ನೆರೆದ ನೆರವಿಯ ಹೃದಯವುಕ್ಕಿ ಕಂಬನಿಯಾಗಿ ಹರಿಯ ತೊಡಗಿತು. ಮೃದುಹೃದಯದ ಜನ ಭೋರಿಟ್ಟು ಅಳಲಾರಂಭಿಸಿತು. ನಾಗ-ಲಬ್ಬೆ ಇದಾವುದನ್ನೂ ಗಣಿಸದವಳಂತೆ ಗಂಭೀರಭಾವದಲ್ಲಿ ಚಿತೆಯ ಬಳಿ ಬಂದಳು. ಪದ್ಧತಿಯಂತೆ ಸುಮಂಗಲೆಯರಿಗೆ ಬೇರೆ ಬೇರೆ ಬಾಗಿಣಗಳನ್ನು ಕೊಟ್ಟಾಯಿತು. ಪುರೋಹಿತರು ಮಂತ್ರಗಳನ್ನು ಹೇಳುತ್ತಲಿದ್ದರು. ಬಂಧು-ಬಾಂಧವರ ಸಂದಣಿ ಹೋ ಎಂದು ಅಳಲು ಮೊದಲುಮಾಡಿತು. ನಾಗಲಬ್ಬೆ ಶಾಂತಮುದ್ರೆಯಿಂದಲೆ ಚಿತೆಯನ್ನು ಮೂರು ಸಲ ಬಲಗೊಂಡು ಬಂದು, ಮೂರು ಸಲ ನಮಸ್ಕರಿಸಿ, ಪತಿಯ ಮಂಚವನ್ನೇರುವಂತೆ ಸಹಜವಾಗಿ ಚಿತೆಯ-ನ್ನೇರಿ ಕುಳಿತಳು. ತನ್ನ ಬಲದ ಕಂಕಣದ ಕೈಯನ್ನು ಮೇಲೆತ್ತಿ, ಯಾರೂ ಅಳದಿರುವಂತೆ ಸೂಚಿಸಿದಳು. ಚಿತೆಯು ಹೊತ್ತಿಕೊಂಡಿತು. ಧಗಧಗಿಸಲು ತೊಡಗಿತು. ಸಿಮಿಸಿಮಿಗುಟ್ಟಿತು. ಅಂದಿನ ಒಂದೊಂದು ಧ್ವನಿಯೂ ಮಾತೂ ನಾಗಲಬ್ಬೆಯ ಸತೀಧರ್ಮವನ್ನು ಕೊಂಡಾಡಲು ತೊಡಗಿದ್ದಿತು.

* * * *

ಮೂರನೆಯ ದಿನ ಅಸ್ಥಿಸಂಚಯನ ಕಾಲದಲ್ಲಿ, ಕೆಂಚೆಗೊಂಡನಿಗೆ ನಾಗಲಬ್ಬೆಯ ಕೈಯ ಕಂಕಣಗಳು— ಅಚ್ಚಳಿಯದೆ ಇದ್ದುವು ದೊರೆತುವಂತೆ. ಆ ಹಿರಿಯ, ಆಚ್ಚರಿಗೊಂಡು, ಭಕ್ತಿಭಾವದಿಂದ ಅವುಗಳನ್ನು ಮನೆಗೆ ತಂದನಂತೆ. ಮುಂದೆ ವಿಧಿಪೂರ್ವಕ ಉತ್ತರಕಾರ್ಯಗಳೆಲ್ಲ ಕೊನೆಗೊಂಡಿರಬಹುದೆನ್ನಿ.

ಕೆಂಚೆಗೊಂಡ ಸತೀಹೋದ ತನ್ನ ಸೊಸೆಯ ನೆನಪಿಗಾಗಿ, ರುದ್ರ-ಭೂಮಿಯಲ್ಲಿ ಸತೀಕಲ್ಲನ್ನು ನೆಡಿಸಿದ್ದಾನೆ. ಅಲ್ಲದೆ ಬೆಳ್ಳಿಯದೊಂದು ಬಲ

ಗೈಯನ್ನು ಮಾಡಿಸಿ, ಚಿತೆಯಲ್ಲಿ ದೊರೆತ ಕಂಕಣಗಳನ್ನು ಆ ಕೈಗೆ ತೊಡಿಸಿ, ಮನೆಯ ದೇವರ ಜಗುಲಿಯಲ್ಲಿರಿಸಿ, ನಿತ್ಯವೂ ಅದರ ಪೂಜೆ ನಡೆಯುವಂತೆ ಅಂದೆಯೆ ಏರ್ಪಾಡು ಮಾಡಿದ್ದಾನೆ.

ಕುಂಚನೂರಿನ ಗೌಡರ ಮನೆಯಲ್ಲಿ ಈಗಲೂ ಆ 'ಕಂಕಣದ ಕೈ' ಇದೆ. ನಾಗಲಬ್ಬೆಯ ಸತೀತ್ವದ ಕತೆಯನ್ನದು ತನ್ನ ಅಶ್ರುತವಾಣಿಯಲ್ಲಿ ಈಗಲೂ ವಿವರಿಸುತ್ತಲಿದೆ. ರಾಯಗೊಂಡನ ಮಗನಿಂದ ನಡೆದುಬಂದ ಸಂತತಿಯವರು, ಈಗಲೂ ಕುಂಚನೂರಿನಲ್ಲಿ ಇದ್ದಾರೆ. ಅವರ ಮನೆತನಕ್ಕೆ ಈ 'ಕಂಕಣದ ಕೈ' ಒಂದು ಹೆಮ್ಮೆಯ ಬಾವುಟವಾಗಿ ಇದೆ. ಬೇಕಾದವರು ಹೋಗಿ ನೋಡಬಹುದು; ಪ್ರೀತಿಯಿಂದ ಅದನ್ನು ಎಲ್ಲರಿಗೂ ತೋರಿಸುವರು.

# ಬಡವಿಯ ಬಾವಿ

ನಮ್ಮ ನಾಡ ಕಬ್ಬಿಗರಾಯ ಸರ್ವಜ್ಞ. ನಮ್ಮ ಎರೆನಾಡಿನ ಸುಖವನ್ನು ಬಲು ಚೆನ್ನಾಗಿ ಉಂಡಿರಬೇಕು ಎಂತಲೇ ಆತ: 'ಊರು ಸನಿಯದಲಿಲ್ಲ; ನೀರೊಂದು ಗಾವುದವು, ಸೇರಿ ನಿಲ್ಲುವೊಡೆ ನೆರಳಿಲ್ಲ: ಬಡಗಣದ ದಾರಿಯೇ ಬೇಡ' ಎಂದು ತನ್ನ ಕಾಲದವರಿಗೆ ಸಾರಿ ಸಾರಿ ಹೇಳಿದ್ದಾನಲ್ಲದೆ, ಮುಂದಣ ಜನಕ್ಕೂ ಎಚ್ಚರಿಕೆಗೆಂದು ಬರೆದು ಇರಿಸಿದ್ದಾನೆ. ಆದರೆ ಬಡಗ ನಾಡಿನಲ್ಲಿಯೆ ಹುಟ್ಟಿ ಬದುಕಿಕೊಂಡು ಬಂದಿರುವ ನಾವುಗಳೆಲ್ಲ ಎಲ್ಲಿಗೆ ಹೋಗಿ ಬಾಳಬೇಕು? ಹೋಗಲೇಬೇಕೆಂದರೆ: 'ಹವಳದಂತೆ ಹಸನಾದ ಗೋದಿಗಳು; ಹವಣಾದ ಕಡಲೆಗಳು; ನವಣೆ-ರಾಗಿಗಳು; ಮುತ್ತಿನ ತೆರದಲಿ ಮಿನುಗುವ ಜೋಳಗಳು' ರಾಶಿರಾಶಿಯಾಗಿ ಬೆಳೆಯುವ ಈ ಕರಿಯ ಮಣ್ಣಿನ ಎರೆಯ ಹೊಲಗಳನ್ನು ಬಿಟ್ಟು ಹೋಗಲು ಮನಸ್ಸು ಹೇಗೆ ಒಪ್ಪಬೇಕು? ಬೇಸಗೆಯಲ್ಲಿ: ನಮಗೆ ಕುಡಿಯಲಿಕ್ಕೂ ನೀರು ದೊರೆಯುವುದು ಕಷ್ಟದಾಯಕವೇನೋ ಸರಿ; ಆದರೆ ಇಲ್ಲಿಯ ಎಮ್ಮೆ-ಆಕಳು ಕರೆಯುವಷ್ಟು ಹಾಲನ್ನು, ನೀರು ಸಿಕ್ಕುವ ನಾಡಿನ ಎಮ್ಮೆ-ಆಕಳು ಏನು ಕರೆದಾವು? ಆದಕ್ಕೆಂತಲೇ ದಾರಿಯನ್ನು ನಡೆವಾಗ ನಾಡನ್ನು ಬೈದ ಅದೇ ಸರ್ವಜ್ಞ ಕವಿ, ಊರನ್ನು ಸೇರಿ ನಮ್ಮವರ ಬದುಕನ್ನು ನೋಡಿದಾಗ:

> "ಜೋಳದಾ ಬೋನಕ್ಕೆ ಬೇನೆಯಾ ತೊಗೆಯಾಗಿ,
> ಕಾಳೆಮ್ಮೆ ಕರೆದ ಹಯನಾಗಿ — ಬೆಳುವಲದ—
> ಮೇಳ ನೋಡು...."

ಎಂದು ಮನಸಾರೆ ಹೊಗಳಿ ಹಾಡಿದ್ದಾನೆ. ಯಾರು ಎಷ್ಟು ಹೊಗಳಿದರೇನು? ಬೇಸಗೆಯಲ್ಲಿ ನಮ್ಮ ನಾಡು ನಮಗೇ ಬೇಸರಾಗಿ 'ಬೇಡವಪ್ಪಾ!' ಎನಿಸುವುದು ಖಂಡಿತವಾದ ಮಾತು.

ಮಳೆಗಾಲ-ಚಳಿಗಾಲಗಳಲ್ಲಿ ನಮಗೆ ಯಾವ ಕಷ್ಟದ ದುಃಖದ ಕಲ್ಪನೆಯೂ ಇರುವುದಿಲ್ಲ. ಹೋಳಿಯ ಹುಣ್ಣಿವೆ ದಾಟಿತೋ, ಕೆರೆಗಳ

ನೀರನ್ನೆಲ್ಲ ಸೂರ್ಯದೇವನ ಕಿರಣಗಳು ಕುಡಿದುಬಿಡುವುವು; ಬಾವಿಯ ಸೆಲೆಗಳ ನೀರನ್ನು ಭೂದೇವತೆಯೇ ಒಳಗೊಳಗೆ ಗುಟುಗರಿಸಿಬಿಡುವಳು. ಮಾನವರಾದ ನಾವು ಮಾತ್ರ, ಐದೈದು ಆರಾರು ಮೈಲು ದೂರ ನಡೆದು ಹೋಗಿ, ನೀರನ್ನು ಸಂಪಾದಿಸಿಕೊಂಡು ಬರಬೇಕಾಗುವುದು. ದೊಡ್ಡ ದೊಡ್ಡ ಮನೆತನದವರು, ಕೇವಲ ನೀರಿನ ಸಲುವಾಗಿಯೆ ಎರಡು ಎತ್ತು, ಒಂದು ಬಂಡಿ, ಒಂದು ಆಳನ್ನು ಬೇರೆಯಾಗಿ ಕಾದಿರಿಸುವರು. ಇಷ್ಟಾದರೂ, ದಿನಕ್ಕೊಬ್ಬರಂತೆ ಸರದಿಯಿಂದ ಸ್ನಾನಮಾಡಬೇಕಾಗುವುದು. ಇನ್ನೊಂದು ಮೋಜಿನ ಮಾತೆಂದರೆ: ಸ್ನಾನ ಮಾಡಿದ ಮಿಕ್ಕಲು ನೀರನ್ನೂ ಹಾಳು ಮಾಡುವಂತಿಲ್ಲ. ಅದಕ್ಕೆಂತಲೇ ಹೊರಚಿನ ಮೇಲೆ ಕುಳಿತು ಅಡಿಯಲ್ಲಿ ಅಗಲ ಬಾಯ ಪಾತ್ರೆಯಿಟ್ಟು ಸ್ನಾನ ಮಾಡುವುದು; ಪಾತ್ರೆಯಲ್ಲಿ ಬಿದ್ದ ನೀರನ್ನು ಕರು-ಮರಿಗಳಿಗೆ ಕುಡಿಸಲು ಉಪಯೋಗಿಸುವುದು. ಬಡವರಾಗಿದ್ದವರ ಬವಣೆಯನ್ನು ಹೇಳಲಿಕ್ಕೇ ಬೇಡ. 'ಸುಜಲಾಂ ಸುಫಲಾಂ ಮಲಯಜ ಶೀತಲಾಂ' ಎಂದು ನಿತ್ಯವೂ ನಾವು ವಂದಿಸುತ್ತಿರುವ ಭಾರತಭೂಮಿಯ ಒಂದು ಭಾಗವೇ ನಮ್ಮ ಬೆಳುವಲ ನಾಡು. ಆದರೇನು? ಬೇಸಿಗೆಯಲ್ಲಿ ಆ ಹಾಡನ್ನು ಹೇಳುವಾಗ 'ಸುಜಲಾ' ಎಂದು ಮಾತನ್ನು ಬಳಸಿದ ಕವಿಯನ್ನು ಕುರಿತು ಮನಸ್ಸು ಕೆರಳುವುದು; ಅವನನ್ನು ನಮ್ಮ ನಾಡಿಗೆ ಕರೆದು ತಂದು, ಬಿಸಿಲಲ್ಲಿ ನೀರನ್ನು ಹೊರಲಿಕ್ಕೆ ಹಚ್ಚಬೇಕು— ಎನಿಸುವುದು. ಇಷ್ಟಾದರೂ ನಾಲ್ಕೈದು ನೂರು ವರ್ಷಗಳಿಂದಲೂ ಈ ನಾಡಿನಲ್ಲಿಯೆ ಮನೆತನ ಮಾಡಿಕೊಂಡಿದ್ದ ನಮ್ಮ ಪೂರ್ವಜಪರಂಪರೆ, ಈ ನಾಡನ್ನು ಬಿಟ್ಟು ಹೋಗಬೇಕೆಂದು ಮನಸ್ಸು ಮಾಡಿದಂತಿಲ್ಲ. ನನಗೂ ಆಗಾಗ ಎನಿಸುತ್ತದೆ: 'ಹೇಗಪ್ಪಾ, ಈ ಭೂದೇವಿಯ ಧಾನ್ಯದ ಉಗ್ರಾಣದಂತಿದ್ದ ಬೆಳುವಲದ ಹೊಲ-ನೆಲಗಳನ್ನು ಬಿಟ್ಟು ಇನ್ನೊಂದು ಕಡೆಗೆ ಹೋಗುವುದು?' ಎಂದು.

ನಾನಿರುವ ಹಳ್ಳಿಯ ಜನರು ಮತ್ತೂ ಭಾಗ್ಯವಂತರೆಂದೇ ಹೇಳಬೇಕು. ಮಿಕ್ಕ ಹಳ್ಳಿಯವರಂತೆ, ನೀರಿಗಾಗಿ ಎಂದೂ ಐದಾರು ಮೈಲು ದಾರಿ ನಡೆದು ಹೋಗಬೇಕಾಗಿಲ್ಲ. ಕೆರೆಯ ನೀರು ಒಣಗಿ ಹೋದಾಗ, ನಮ್ಮೂರ ಭಾಗ್ಯವಾಗಿ ನಮಗೆ 'ಬಡವಿಯ ಬಾವಿ' ಇದ್ದೇ ಇದೆ. ನೂರಾರು ಪಾವಟಿಗೆ ಇಳಿದು ಹತ್ತಿ ನೀರು ತರಬೇಕಾಗುವುದಾದರೂ, ನಮ್ಮೂರಲ್ಲಿಯೆ ನಮಗೆ

ನೀರು ಸಿಕ್ಕುವುದು. ಇಷ್ಟೇ ಅಲ್ಲ, ನೆರೆಹೊರೆಯ ಹಳ್ಳಿಗಳವರಿಗೂ ಈ ಬಡವಿಯ ಬಾವಿಯೇ ನೀರಿಗೆ ಆಧಾರವಾಗಿರುವುದು. ಬೇಸಗೆಯಲ್ಲಿ ನಮ್ಮ ಊರಿಗೆ ಬಂದು ನೋಡಬೇಕು: ಬಾವಿಯ ಸುತ್ತುಮುತ್ತು— ಜಾತಿ–ಮತ ಹೆಣ್ಣು-ಗಂಡುಗಳ ಭೇದವಿಲ್ಲದೆ— ಜನಜಾತ್ರೆ ನೆರೆದಿರುವುದು. ಇಪ್ಪತ್ತು. ನಾಲ್ಕು ತಾಸೂ ಅಲ್ಲಿ ಮಂದಿ–ಮಕ್ಕಳ ಓಡಾಟವಿರುವುದು. ಮಿಕ್ಕ ದಿನಗಳಲ್ಲಿ ಸದ್ದಿಲ್ಲದೆ ಬಿದ್ದುಕೊಂಡಿರುವ ಆ ಬಡವಿಯ ಬಾವಿ, ಈಗ ನಿದ್ದೆ ತಿಳಿದು ಎದ್ದಂತೆ ಕಾಣುತ್ತಿರುವುದು.

ನಮ್ಮೂರಿನ ಉತ್ತರಕ್ಕೆ, ಊರ ಬೇಲಿಗೆ ಹೊಂದಿಯೆ ಈ ಬಾವಿ ಇದೆ. ದಂಡೆಯ ಮೇಲೆ ಹಳೆಯ ಕಾಲದ್ದೊಂದು ಅಗಳಿಯ ಮರವಿದೆ. ಅದು ನಮ್ಮ ಹಳ್ಳಿಯ ಪೂರ್ವಜರನ್ನು ಕಣ್ಣಾರೆ ಕಂಡಿದ್ದು, ಅವರ ಕತೆಗಳನ್ನು ತನ್ನ ಭಾಷೆ ಯಲ್ಲಿ ನಮಗೆಲ್ಲ ಹೇಳುತ್ತಿರುವುದೇನೋ— ಎಂಬಂತೆ ಸಪ್ಪುಳ ಮಾಡುತ್ತ, ಯಾವಾಗಲೂ ಗಾಳಿಗೆ ಅಲ್ಲಾಡುತ್ತಿರುವುದು. ಅದರ ಅಡಿಯಲ್ಲಿ, ಅಚ್ಚ ಕರಿಯ ಕಲ್ಲಿನಿಂದ ಕಟ್ಟಿದ ವಿಶಾಲವಾದ ಬಾವಿ ಇದೆ. ಸುತ್ತುಗೋಡೆಯ ಬಾಗಿಲನ್ನು ದಾಟಿ ಒಳಗೆ ಹೋಗಿ ನೋಡಿದರೆ, ಬಾವಿಯ ಎರಡು ಬದಿಗಳಲ್ಲಿ, ನೀರಿನಾಳದ ವರೆಗೂ ಕರಿಯ ಕಲ್ಲಿನ ಪಾವಟಿಗೆಗಳಿವೆ. ಸುಗ್ಗಿಯಲ್ಲಿ ಹಕ್ಕಿ ಕಾಯುವಾಗ, ಕವಣೆಯಲ್ಲಿ ಇರಿಸಲಿಕ್ಕೆ ಕೈಗಲ್ಲು ಕೂಡ ಸಿಕ್ಕದಿರುವ ನಮ್ಮ ಊರಲ್ಲಿ, ಇಂತಹ ಕರಿಯ ಕಲ್ಲುಗಳನ್ನು ಎಲ್ಲಿಂದ ತಂದೆರಬಹುದೊ !— ಹೇಗೆ ತಂದಿರಬಹುದೊ !

ಈ ಬಾವಿಗೆ ಜೀವಂತ ಝರಿಗಳಿವೆ. ಎಂದೂ ನೀರು ಬತ್ತಿಹೋಗುವು ದಿಲ್ಲ. ಸೊಗಸಾದ ಸಿಹಿನೀರು. ಆದರೂ ಕೆರೆಯಲ್ಲಿ ನೀರು ತುಂಬಿರುವಾಗ, ಹರಿಜನರ ಹೊರತು ಈ ಬಾವಿಯ ನೀರನ್ನು ಯಾರೂ ಬಳಸುವುದಿಲ್ಲ. ಎಲ್ಲ ಕಡೆಯಂತೆ ನಮ್ಮಲ್ಲಿಯೂ ಹರಿಜನರಿಗೆ ಕೆರೆಯ ನೀರನ್ನು ಮುಟ್ಟಗೊಡುವು ದಿಲ್ಲ. ಅಲ್ಲದೆ ಅವರು ಕೆರೆಗೆ ಬಂದರೆ, ಮೇಲುಕುಲದವರಲ್ಲಿ ಯಾರೂ ಅವರಿಗೆ ನೀರನ್ನು ಹನಿಸುವ ಉಪಕಾರ ಮಾಡುವುದಿಲ್ಲ. ಆದುದರಿಂದಲೆ ಸ್ವಲ್ಪ ಶ್ರಮವಾದರೂ ತೊಂದರೆಯಿಲ್ಲವೆ ನೀರು ದೊರೆಯುವುದೆಂದು, ನಮ್ಮೂ ರಿನ ಹರಿಜನರೆಲ್ಲ ಪ್ರತಿನಿತ್ಯ ಬಡವಿಯ ಬಾವಿಯ ನೀರನ್ನೇ ತಂದುಕೊಳ್ಳುವರು.

ಕೆರೆಯ ನೀರು ಬತ್ತಿಹೋದಾಗ, ನಮ್ಮೂರಿನ ಕೆಲವು ತೀಕ್ಷ್ಣ ಮಡಿವಂತ ಜನರಿಗೆ, ಹರಿಜನರು ಮುಟ್ಟಿದ ಈ ಬಾವಿಯ ನೀರನ್ನು ತಂದು ಬಳಸುವುದೆಂದರೆ, ಜೀವದ ಸುತ್ತು ಬಂದಂತಾಗುವುದು. ಆದರೆ ಮಾಡುತ್ತಾರೇನು ? ಹರಿಜನರು ನೀರು ತುಂಬುವುದನ್ನು ಬಿಡಿಸುವುದು ಅವರ ಕೈಯೊಳಗಿನ ಮಾತಾಗಿರಲಿಲ್ಲ. ಇಂದಿನ ಕಾಂಗ್ರೆಸಿನ ಸುಧಾರಕರ ಸರಕಾರವಲ್ಲ........ ಹಿಂದಿನ ಕಾಲದ ಯಾವುದೋ ಸನಾತನ ಸರಕಾರವೇ, ಹರಿಜನರಿಗೆ ಬಾವಿಯಲ್ಲಿ ಹೊಕ್ಕು ನೀರು ತುಂಬುವ ಅಧಿಕಾರವನ್ನು ಒಪ್ಪಿ ಕೊಟ್ಟಿದೆ. ಸಾಧ್ಯವಿದ್ದರೆ ನಮ್ಮ ಹಿಂದಿನ ಹಿರಿಯರು ಪ್ರಯತ್ನ ಮಾಡಿ, ಎಂದೋ ಈ ಅಧಿಕಾರವನ್ನು ಕಸಿದುಕೊಳ್ಳಬಹುದಾಗಿತ್ತು; ಆದರೆ ಬಾವಿಯ ದಂಡೆಯ ಮೇಲೆ ನೆಟ್ಟು ನಿಲ್ಲಿಸಿದ ಶಿಲಾಶಾಸನದಲ್ಲಿ, ಹೀಗೆಂದು ಸ್ಪಷ್ಟವಾಗಿ ಬರೆಯಿಸಲಾಗಿದೆ :

“....ಹೊಲೆಯ, ಮಾದಿಗ, ಚಮ್ಮಾರ ಕಡೆಯಾಗಿ ಆವುದೆ ಜಾತಿಯವರುಂ ಆವುದೆ ನೀತಿಯವರುಂ, ಭೇದವಿಲ್ಲದಂತೆ ಈ ವಾಪಿಯೊಳಿಳಿದು ತೀರ್ಥಮಂ ಕೊಳಲಕ್ಕುಂ. ಇದಂ ತಡೆಯಲಾಟಿಪ ಮೇಲುಕುಲಜರು, ಪಂಚಮಹಾಪಾತಕಕ್ಕೆ ಪಕ್ಕಾದಪರ್; ಮುಂದಿನ ಭವದೊಳು ಪಲ್ಲಿಯಾಗಿ ಕೇತನಾಗಿ ಪುಟ್ಟಿದಪರ್.... ”

ಆದುದರಿಂದಲೆ ಯಾವ ಶೀಲವಂತರಿಗೂ ಸರಕಾರಕ್ಕೂ ಇದರ ವಿಷಯದಲ್ಲಿ ಏನು ಮಾಡಲಿಕ್ಕೂ ಬರುವಂತಿಲ್ಲ. ಅದಕ್ಕೆಂತಲೆ ನಮ್ಮ ಗ್ರಾಮದ ಮಹಾಜನರು, ಹರಿಜನರಿಗಾಗಿ ಒಂದು ಬದಿಯ ಪಾವಟಿಗೆಗಳೆಂದೂ, ಮೇಲುಕುಲದವರಿಗಾಗಿ ಇನ್ನೊಂದು ಬದಿಯವೆಂದೂ ನಿರೂಪಿಸಿ ಕೊಟ್ಟಿದ್ದರು. ಮಾಡುವರೇನು ? ಆಪದ್ಧರ್ಮ ! ನೀರಿಲ್ಲದೆ ಬದುಕಲಿಕ್ಕೆ ಸಾಧ್ಯವಿದೆಯೆ ? ಅಲ್ಲದೆ ಕೇವಲ ಮಡಿಯೊಂದರ ಸಲುವಾಗಿ, ಐದಾರು ಮೈಲು ದೂರ ಹೋಗಿ ನೀರನ್ನು ತರುವ ಕಷ್ಟ ಸಹಿಸಲಿಕ್ಕೆ ಯಾರ ಮನಸ್ಸು ಸಿದ್ಧವಾದೀತು ? ಅದಕ್ಕೆಂತೇ ಹರಿಜನರು ಮುಟ್ಟಿದ ಬಸವಿಯ ಬಾವಿಯ ನೀರನ್ನು, ಹರಿ-ಹರರ ಅಭಿಷೇಕ-ನೈವೇದ್ಯಗಳಿಗೂ ಉಪಯೋಗಿಸುತ್ತಿರುವುದು, ನಮ್ಮೂರಲ್ಲಿ ಎಂದಿನಿಂದಲೂ ನಡೆದು ಬಂದ ಪದ್ಧತಿ. ಯಾವ ಧರ್ಮಪೀಠಾಧಿಕಾರಿಗಳೂ ಇದಕ್ಕಾಗಿ ನಮ್ಮ ಊರ ಜನಗಳಿಗೆ

ಎಂದೂ ಬಹಿಷ್ಕಾರ ಹಾಕಿಲ್ಲ. ಎಷ್ಟೋ ಸಲ, ಬೇರೆ ಬೇರೆ ಪಂಥದ ಸ್ವಾಮಿಗಳವರು ನಮ್ಮ ಹಳ್ಳಿಗೆ ಬಂದಾಗ, ಇದೇ ಬಾವಿಯ ತೀರ್ಥವನ್ನೇ ತಮ್ಮ ಆಚಮನ, ಅರ್ಘ್ಯ, ತರ್ಪಣ, ಅಗ್ಘವಣಿಗಳಿಗಾಗಿ ಬಳಸಿದ್ದಾರೆ; ಬಳಸುತ್ತಾರೆ.

ಬಾವಿಯ ದಂಡೆಯ ಮೇಲಿದ್ದ ಶಿಲಾಶಾಸನ, 'ತೊರೆಗಲ್ಲ ಪುರದ ದೊರೆ—ಹಿರಿಯ ಜಾಯೇಂದ್ರ'ನ ಆಡಳಿತದ ಕಾಲವನ್ನು ಸೂಚಿಸುವುದು. ಆದರೆ ಶಾಸನ ಬರೆದ ಶಕವರುಷದ ಅಂಕಿಗಳು ನಷ್ಟವಾಗಿ ಹೋಗಿರುವುದರಿಂದ, ಸರಿಯಾದ ಕಾಲ ತಿಳಿಯುವಂತಿಲ್ಲ. ಹಿರಿಯ ಜಾಯೇಂದ್ರ ದೊರೆಯ ಆಜ್ಞೆಯಿಂದಲೆ ಶಾಸನವನ್ನಲ್ಲಿ ನೆಡಲಾಗಿದೆಯಂತೆ. ಆ ದೊರೆಯ ನಿಶ್ಚಿತಕಾಲವು ಯಾವುದೆಂಬುದನ್ನು ಇತಿಹಾಸಜ್ಞರು ಕಂಡುಹಿಡಿದು ಹೇಳಬೇಕು.

ನಮ್ಮೂರಿನ ಜನರ ತಿಳಿವಳಿಕೆಯಂತೆ ಹೇಳಬೇಕಾದರೆ: ಈ ಬಾವಿಯನ್ನು ಜಕಣಾಚಾರ್ಯರು ಅಗೆದು ಕಟ್ಟಿದರು. ತಮ್ಮ ಮಂತ್ರಸಾಮರ್ಥ್ಯದಿಂದ ಅವರು ಎರೆಯ ಮಣ್ಣನ್ನೇ ಕರಿಯ ಕಲ್ಲನ್ನಾಗಿ ಮಾಡಿ, ಒಂದೇ ಒಂದು ರಾತ್ರಿಯಲ್ಲಿ ಕಟ್ಟಿ ಮುಗಿಸಿದರು. ದಂಡೆಯ ಮೇಲೆ ಇದ್ದ ಅರಳಿಯ ಮರವೂ ಜಕಣಾಚಾರ್ಯರೇ ನೆಟ್ಟದು. ಬಾವಿಯಲ್ಲಿಯ ನೀರು ಬತ್ತಿ ಹೋಗದಂತೆ, ಅರಳಿಯ ಮರದಲ್ಲಿರುವ ಬ್ರಹ್ಮರಾಕ್ಷಸವು, ಯಾವಾಗಲೂ ಕಾವಲು ಮಾಡುತ್ತಿರುತ್ತದೆ. ಆದುದರಿಂದಲೆ ಎಂತೆಂತಹ ಬಾವಿ-ಕೆರೆಗಳ ನೀರು ಒಣಗಿ ಹೋದರೂ, ಈ ಬಾವಿಯ ನೀರು ಒಣಗುವುದಿಲ್ಲ.... ಇ ಇ.

ಇದನ್ನೆಲ್ಲ ನಾನು ಹೇಗೆ ನಂಬಬೇಕು? ಐತಿಹಾಸಿಕ ಕಾಲದಲ್ಲಿ ಯಾವನಾದರೂ ಸಿರಿವಂತ ಸೆಟ್ಟಿಯಾಗಲಿ, ಸಾಮಂತ-ಮನ್ನೆಯರಾಗಲಿ, ಕಟ್ಟಿಸಿರಬಹುದೆಂದು ಭಾವಿಸಿದೆ; ಆದರೆ ಪರಂಪರೆಯಿಂದ ನಡೆದುಕೊಂಡು ಬಂದಿದ್ದ 'ಬಡವಿಯ ಬಾವಿ' ಎಂಬ ಹೆಸರು, ನನ್ನನ್ನು ಬಹಳ ದಿನಗಳಿಂದಲೂ ಕಾತುರ-ಕುತೂಹಲಗಳಿಗೆ ಈಡು ಮಾಡಿದ್ದಿತು. ನಿಜವಾದ ಸಂಗತಿಯನ್ನು ತಿಳಿಸಿ ನನ್ನನ್ನು ಸಮಾಧಾನಗೊಳಿಸುವ ಬಲ್ಲಿದರು, ನಮ್ಮ

ಹಳ್ಳಿಯಲ್ಲಂತೂ ಯಾರೂ ಇರಲಿಲ್ಲ. ನಮ್ಮ ಅಜ್ಜಿ ಮಾತ್ರ ಹೀಗೆ ಹೇಳು-ತ್ತಿದ್ದಳು :

" ಇದs ಊರೊಳಗ ಒಬ್ಬಾಕಿ ರಡ್ಡ್ಯಾರ ಮುದಿಕಿ ಇದ್ದಳಂತ; ಆಕಿ ಭಾಳ ಬಡವಿ ಇದ್ದಳಂತ; ಆಕಿನs ಏನೋ ಈ ಭಾವೀ ಕಟ್ಟಿಸ್ಯಾಳಂತ. ಆದಕ್ಕs ಇದನ್ನ ' ಬಡವಿಯ ಬಾವಿ ' ಅಂತ ಕರೀತಾರಂತ ! "

ಅಜ್ಜಿಯ ಈ ಅಂತೆಯ ಕಂತೆ ನನಗೆ ಸಂಪೂರ್ಣ ಸುಳ್ಳೆಂದು ಎನಿಸದೆ ಇರಲಿಲ್ಲ. ಸತ್ಯವೆಂದು ಎನಿಸಬೇಕಾದರೂ ಹೇಗೆ? ನನ್ನ ಆರು ತಿಂಗಳ ಮಗು ಶೀನ, ಆನೆಯೊಂದನ್ನು ಎತ್ತಿಹಿಡಿದನೆಂದು ಯಾರಾದರೂ ಹೇಳಿದರೆ, ನಂಬ-ಬಹುದೇ ನಾನು ? ಬಡವಿಯಾದ ಮುದುಕಿ ಏನು ? ಇಂತಹ ಬಾವಿಯನ್ನು ಆಕೆ ಕಟ್ಟಿಸುವುದೆಂದರೆ ಏನು ? ಇದೂ ಒಂದು ನಮ್ಮ ಹಳ್ಳಿಗರು ಹೇಳುವ ಜಕಣಾಚಾರ್ಯರ ಕತೆಯಂತೆ ಪುಕ್ಕಟೆಯ ಪುರಾಣ— ಎಂದು ಮನಸ್ಸಿನಲ್ಲಿ ನಿರ್ಣಯಿಸಿಕೊಂಡೆ. ನನಗೆ ತಿಳಿದಂತೆ— ಕಳೆದ ಹದಿನಾರು ವರ್ಷಗಳ ವರೆಗೂ ' ಬಡವಿಯ ಬಾವಿ ' ನನಗೆ ಒಡೆಯದ ಒಗಟವಾಗಿಯೆ ಇದ್ದಿತು.

* * * *

ಹೋದ ಸಲ ಬೇಸಗೆಯಲ್ಲಿ, ಇತಿಹಾಸ ಸಂಶೋಧಕರೊಬ್ಬರು ನಮ್ಮ ಊರಿಗೆ ಬಂದರು. ಇಂತಹ ಅತಿಥಿ ಅಭ್ಯಾಗತರು ಬಂದರೆ, ಅವರ ಬೀಡಾರ ನಮ್ಮ ಮನೆಯಲ್ಲಿಯೆ. ಬಂದವರ ಆದರ-ಸತ್ಕಾರಗಳಾಗಿ ಮಾತನಾಡುತ್ತ ಕುಳಿತಾಗ, ಆ ಸಂಶೋಧಕರು ನಮ್ಮ ದೂರದ ಸಂಬಂಧಿಕರೆಂಬುದೂ ಗೊತ್ತಾ-ಯಿತು. ಸರಿ, ಅವರೂ ನಮ್ಮ ಮನೆಯವರೇ ಆದರು. ಸಲುಗೆಯಿಂದ ನಾನು ಅವರನ್ನು ಕೇಳಿದೆ:

" ಈ ಹಳ್ಳಿಯಲ್ಲಿ ಏನಿದೆ— ನಿಮ್ಮ ಇತಿಹಾಸ ಸಂಶೋಧನದ ಕೆಲಸ ? ಇಲ್ಲೇನು ಹಳೆಯ ಗುಡಿಗಳಿಲ್ಲ; ಕೋಟೆ-ಕೊತ್ತಳಗಳಿಲ್ಲ ! "

" ಅದ್ಯಾಕೆ ರಾಯರೆ, ಒಂದು ಮಹತ್ವದ ಐತಿಹಾಸಿಕ ಸಂಗತಿಯು ಈ ಊರಲ್ಲಿ ಇದೆಯೆಂತಲೇ ಇಲ್ಲಿಗೆ ಬಂದಿದ್ದೇನೆ. ನಿಮ್ಮೂರ ' ಬಡವಿಯ ಬಾವಿ 'ಯನ್ನು ಕಣ್ಣಾರೆ ಕಂಡು, ಅದರ ಬೇರೆ ಬೇರೆ ರೀತಿಯ ಫೋಟೊ

ತೆಗೆದುಕೊಂಡು ಹೋಗಬೇಕಾಗಿದೆ. ಅದರ ವಿಷಯವನ್ನು ಒಳಗೊಂಡ ಒಂದು ಐತಿಹಾಸಿಕ ಕಾಗದವನ್ನು, ಟಿಪ್ಪಣಿಗಳೊಂದಿಗೆ ಪ್ರಸಿದ್ಧ ಮಾಡ-ಬೇಕಾಗಿದೆ."

"ಅದೇನು ಐತಿಹಾಸಿಕ ಕಾಗದ? ಅದರಲ್ಲಿ ಕೂಡ 'ಬಡವಿಯ ಬಾವಿ' ಎಂದು ಹೆಸರು ಬಂದಿದೆಯೇನು?"

"ಹೌದು ಹೌದು, ಅದೇ ಹೆಸರು ಬಂದಿದೆ."

ನಾನು ಅಚ್ಚರಿಗೊಂಡವನಾಗಿ ಕೇಳಿದೆ:

"ಈ ಹೆಸರು ಬರಲಿಕ್ಕೆ ಕಾರಣವನ್ನೇನಾದರೂ ಕೊಡಲಾಗಿದೆಯೋ ಅದರಲ್ಲಿ?"

"ಓಹೋ! ಎಲ್ಲವನ್ನೂ ವಿಶದಪಡಿಸಲಾಗಿದೆ. ಈ ಗ್ರಾಮದಲ್ಲಿದ್ದ ಬಡವಿ ಮುದುಕಿಯೊಬ್ಬಳು, ಆ ಬಾವಿಯನ್ನು ಕಟ್ಟಿಸಲಿಕ್ಕೆ ಮೂಲ ಕಾರಣಳಾಗಿದ್ದಾಳೆ."

ನಮ್ಮ ಅಜ್ಜಿಯ ಅಂತೆಯ ಕಂತೆ ನನಗೆ ನೆನಪಾಯಿತು. ಬೆರಗು ಹೆಚ್ಚಿತು. ಆತುರದ ಧ್ವನಿಯಲ್ಲಿ ಕೇಳಿದೆ:

"ಅದು ಹೇಗೆ? ಬಡವಿ ಮುದುಕಿ ಹೇಗೆ ಕಾರಣಳಾಗಿದ್ದಾಳೆ?"

"ಅದೊಂದು ಮನೋರಂಜಕ ಕಥೆ. ಮೊನ್ನೆ ಮೊನ್ನೆ ನಾನು, ನವಿಲುಗುಂದದ ಸರದೇಸಾಯಿಯವರ ಹಳೆಯ ದಫ್ತರುಗಳನ್ನು ಸಂಶೋಧಿಸು-ತ್ತಿರುವಾಗ, ನಿಮ್ಮೂರ ಬಾವಿಗೆ ಸಂಬಂಧಿಸಿದ ಹಳೆಯ ಲೇಖನ ಒಂದು ಸಿಕ್ಕಿತು."

"ಎಲ್ಲಿದೆ ಆ ಲೇಖನ? ಅದರಲ್ಲಿ ಏನೇನು ಬರೆದಿದೆ!"

ನನ್ನ ಕುತೂಹಲವನ್ನು ಕಂಡೋ ಏನೋ! ರಾಯರು ಥಟ್ಟನೆ ಮೇಲಕ್ಕೆದ್ದರು. ಗೂಟಕ್ಕೆ ತಗುಲಿಸಿದ ತಮ್ಮ ಕೈಚೀಲದೊಳಗಿಂದ ಕಾಗದವೊಂದನ್ನು ತೆಗೆದು, ನನ್ನ ಕೈಗೆ ಕೊಡುತ್ತ ಹೇಳಿದರು:

"ಇದು ಮೂಲಲೇಖನವಲ್ಲ. ಮೂಲವು ಕರಡುಕಾಗದದಲ್ಲಿದ್ದು ತೀರ ಜೀರ್ಣವಾಗಿದೆ. ಅದನ್ನು ಬರೆದ ಅಕ್ಷರಗಳು ೩೫೦ ವರ್ಷಕ್ಕಿಂತ

ಪೂರ್ವದುವು ಇವೆ. ನಾನೇ ಕಷ್ಟಪಟ್ಟು ಮೂಲದ ಈ ನಕಲನ್ನು ತೆಗೆದಿದ್ದೇನೆ. ಪುಣ್ಯಕ್ಕೆ ಅಕ್ಷರಗಳಾವುವೂ ನಾಶವಾಗಿರಲಿಲ್ಲ !"

ನಾನು ಆ ಕಾಗದವನ್ನು ಕೈಗೆ ತೆಗೆದುಕೊಂಡು, ಮಡಿಕೆಯನ್ನು ಬಿಚ್ಚಿ, ಕುತೂಹಲದಿಂದ ನೋಡಲಾರಂಭಿಸಿದೆ. ನಕಲು ಮಾಡಿದವರ ಅಕ್ಷರಗಳು ಮುತ್ತಿನಂತೆ ಸ್ಫುಟವಾಗಿ ಇದ್ದುವು. ಸುಲಭವಾಗಿಯೇ ಓದಲಿಕ್ಕೆ ಮೊದಲು ಮಾಡಿದೆ :

"ಶಕವರ್ಷ ೧೬೫೨ರ ಬೇಸಗೆಯೊಳೊಂದು ದಿವಸದಲ್ಲಿ, ತೊರೆಗಲ್ಲ ಪುರವರಾಧೀಶ ಹಿರಿಯ ಜಾಯೇಂದ್ರಪ್ರಭು, ನಾಡನೂ ನಾಡಿಗರನೂ ನೋಡಲೆಂದು, ಕುದುರೆಯನೇರಿ— ಏಕಾಕಿಯಾಗಿ— ಪಯಣಂಬೋದಂ. ಬೆಳುವಲದ ಪಳ್ಳಿ-ಪಟ್ಟಿಗಳಂ ನಿಟ್ಟಿಸುತ ನಡೆತರ್ಪಾಗ, ಹೊತ್ತು ನೆತ್ತಿಯೊಳೇರಿ ನಿಂದುದು. ಗ್ರೀಷ್ಮದ ಬಿರುಬೇಗೆ ಉರಿಯುತಿತ್ತು. ಪ್ರಭುವಿಂಗೆ ಅತಿಯಾದ ಬಾಯಾರಿಕೆಯಾಯ್ತು. ಬಿಸಿಲ ಧಗೆ ಎಚ್ಚರಂದಪ್ಪಿಸಿತು. ಕಾಲುದಾರಿಯ ಕಿರುವಳ್ಳಿಯನು ಪೊಕ್ಕು, ಮನೆ-ಮನೆಗಳಲ್ಲಿಯೂ ಕುಡಿನೀರಿಗಾಗಿ ಬಾಯ್ಬಿಟ್ಟನಾತ. ಆದಾರ ಮನೆಯೊಳೂ ನೀರು ದೊರೆಯದಿರಲು, ದೊರೆಯ ಗಂಟಲೊಣಗಿ, ಕರುಳುಗಳು ಸೆಳೆಯತೊಡಗಿರ್ದುವು. ಕಿರುವಳ್ಳಿಯ ಕೊನೆಯೊಳೊಂದು ಮುರುಕು ಕುಟಿಯನು ಕಂಡು, ದೊರೆ ನಡೆದು ನಿಂದ. ಆ ಗುಡಿಸಲೊಡತಿ ಬಡವಿ ಮುದುಕಿ, ಮಣ್ಣ ಹರವಿಯಲಿ ತಣ್ಣೀರ ತುಂಬಿ ಇರಿಸಿಕೊಂಡು, ಬಂದ ಪರದೇಶಿಗರ ಬಾಯಾರಿಕೆಗೆ ನೀರನೆರೆಯುತಿರ್ದಳು. ಜಾಯೇಂದ್ರದೊರೆ ಬಾಯಾರಿ, ಬಸವಳಿದು ಬಂದು ಬಾಗಿಲೊಳು ನಿಂದ. ಕುಡಿಯೆ ನೀರನು ಕೇಳ್ದ. ಮುದುಕಿ ಅವ ದೊರೆಯೆಂಬುದನರಿಯದೆ, ಕರುಣೆಯಲಿ ಬರಮಾಡಿಕೊಂಡು, ಡಗೆವೊಯ್ದ ಆತಂಗೆ ಬೆಲ್ಲದ ಪಾನಕಮಂ ಕೊಟ್ಟು, ತಣಿವನಕ ತಣ್ಣೀರ ಕುಡಿಯಲಿತ್ತಳು. ಜಾಯೇಂದ್ರ ಭೂವರನು ಮರುಜನುಮ ಪಡೆದವನಂತಾಗಿ, ಮೆಚ್ಚಿ ಬಡ ಮುದುಕಿಗಿಂತೆಂದಂ :

"ನಿನ್ನ ಹೆಸರೇನು ತಾಯೀ !"

"ಮಗನೆ, ತಿಮ್ಮಬ್ಬೆಯೆಂದು ಕರೆವರು ನನ್ನ !"

“ಜಾತಿ ಯಾವುದು ನಿನಗೆ ?”

“ರಡ್ಡಿಗಳ ಮಗಳು ನಾ ! ತಿರುಮಲೆಯ ದೊರೆ ಸಿರಿವೇಂಕಟ ನಮ್ಮ ಮನೆಯ ದೈವತವಪ್ಪಾ !”

“ನಿನ್ನವರು ಇಹರೇನು ಇನ್ನು ಯಾರಾದರೂ ?”

“ಎಲ್ಲರೂ ನನ್ನವರೆ ! ನೀನೂ ನನ್ನಯ ಮಗನೆ !”

“ಅದು ಸರಿಯೆ; ಮನೆಯೊಳಿನ್ನಾರಿಹರು ?”

“ಯಾರು ಯಾರೂ ಇಲ್ಲ. ಒಬ್ಬಳೇ ನಾನಿರುವೆ. ಪುಣ್ಯವಂತರ ಮನೆಯಲಿ ದುಡಿದು ಉಣ್ಣುವೆ; ಬಾಯಾರಿ ಬರುವ ಜನಕಾಗಿ, ಇಲ್ಲಿ ನೀರಿರಿಸಿಕೊಂಡು ಕುಳಿತಿರುವೆ. ಇದು ನನ್ನ ಕುಲದೈವತಕೆ ಸಲ್ಲಿಸುವ ಸೇವೆ !”

ಮನಕರಗಿ ಜಾಯೇಂದ್ರ ಮುದುಕಿಗಿಂತೊರೆದ :

“ತಾಯೆ, ನೀನಿಂದು ನೀರಿತ್ತು ನನ್ನ ಹರಣವನ್ನುಳುಹಿಸಿದೆ; ನಾನು ನಾಡಿನ ದೊರೆಯು, ಹಿರಿಯ ಜಾಯೇಂದ್ರ ! ಬೇಡಿದುದ ನಿನಗೆ ನಡಸಿಕೊಡುವೆ. ಮನ ಬಯಸಿದುದ ಬೇಡು !”

“ದೇವರೆ, ತಂದೆ, ನಾ ಬಡವಿ. ನನಗೆ ಬೇಕಾದುದೇನು ? ಆದರೂ ಒಂದು ಕೊರತೆಯು ನನಗೆ. ನನ್ನ ದೇವರ ಸೇವೆಯನು ನಡೆಯಿಸಲು ಕಷ್ಟವಾಗಿಹುದು. ಬಾಯಾರಿ ಬರುವ ಜನಕೆಲ್ಲ ನೀರನು ಪೂರಯಿಸುವನಿತು ಶಕ್ತಿಯಿಲ್ಲೆನಗೆ ! ಹರಿದಾರಿಯುದ್ದದಿಂ ಹೊತ್ತು ನಾ ತರಬೇಕು. ನೀನು ದೊರೆ ! ಬೇಕಾದುದನು ಮಾಳ್ಪ ಬಲುಹು ನಿನ್ನೊಳಿದೆ. ಇಲ್ಲಿ ಬಳಿಯೊಳೆ ಒಂದು ಬಾವಿಯನು ಅಗಿಸಿಬಿಟ್ಟೊಡೆ, ನಮ್ಮೂರಿಗೈತರುವ ಜನಕೆ ಬಾಯಾರಿಕೆಯ ಭಯವಿರದು. ತಿರುಮಲೆಯ ತಿಮ್ಮಪ್ಪ ನಿನಗೆ ಒಳ್ಳಿತಂಗೈಯುವನು.

“ಅಂತಕ್ಕೆ” ಎಂದನಾ ಜಾಯೇಂದ್ರ ಭೂಪ. ಮರಳಿ ಕುದುರೆಯನೇರಿ ತೊರೆಗಲ್ಲಿಗೈತಂದ. ಮಂತ್ರಿಯಂ ಕರೆದು, ನೀರನಿತ್ತ ಮುದುಕಿಯ ಮನೆಯ ನೆರೆಯೊಳೆ ಬಾವಿಯಂ ಸವಿಸಲಿಕೆ ಕಟ್ಟಾಣತಿಯನಿತ್ತನಾ ದಿನವೆ.

ವಂತ್ರಿ ಹಳ್ಳಿಗೆ ಹೋಗಿ, ಒಡ್ಡರಂ ಓಜರಂ ಸಾಸಿರ ಸಂಖ್ಯೆಯಲಿ ಸೇರಿಸಿ, ಬಡವಿ ತಿಮ್ಮಬ್ಬೆಯ ಹೆಸರಿಂದೆ ಬಾವಿಯೊಂದನು ಸವೆಸಿ, ಕರಿಯ ಪಾಸರೆಯಿಂದ ಕಟ್ಟೆ ಪೇಟ್ಟಲ ಬಲಿಸು, ದೊರೆಯ ಕಟ್ಟಾಣತಿಯ ಪೂರಯಿಸಿದ. ಮುದುಕಿಯ ಬಯಕೆಯನರಿದು, ಜಾತಿ-ಕುಲಭೇದಂಗಳಿಲ್ಲದೆ, ಸರುವರುಂ ಸವಾನವಾಗಿ, ಭಾವಿಯ ನೀರಂ ಕೊಳುವುದೆಂದು ಶಾಸನವ ಬರೆಯಿಸಿ ನೆಟ್ಟನಾ ಮಂತ್ರಿವರ. ಈ ಕಾರ್ಯ ಎಂಟು ಮಾಸಗಳನಕ ಎಡೆಬಿಡದೆ ನಡೆಯಿತ್ತು. ಜಾಯೆಂದ್ರದೊರೆಯ ಭಂಡಾರದಿಂದ ಈ ಬಾವಿಗೆ ಹತ್ತು ಸಾಸಿರ ಚಿನ್ನದ ಟಂಕಗಳ ಬಳಕೆಯಾಯಿತ್ತು. ಈ ಸಂಗತಿಯನೆಲ್ಲ ಬರೆದಿರಿಸಿದಾತಂ ತೊರೆಗಲ್ಲ ದೊರೆಯ ಭಾಂಡಾರಿಗ ಗುಂಡುಮದೇವಂ. ಶ್ರೀ ಶ್ರೀ ಶ್ರೀ ”

ಕಾಗದವನ್ನು ಓದಿ ಮುಗಿಸಿದೆ. ಕಾವ್ಯವೊಂದನ್ನು ಓದಿದಂತಹ ಭಾವಾನಂದವಾಯಿತು. ಬಹುದಿನಗಳಿಂದಲೂ ನನ್ನನ್ನು ಕುತೂಹಲದಲ್ಲಿ ಇರಿಸಿದ್ದ ಒಗಟವು ಒಡೆದಂತಾಯಿತು. ಬಂದಿದ್ದ ಇತಿಹಾಸಸಂಶೋಧಕರಿಗೆ ಮತ್ತೆ ಮತ್ತೆ ಕೃತಜ್ಞತೆಯನ್ನು ಸಲ್ಲಿಸಿದೆ. ಅವರ ಸಂಶೋಧನೆಗೆ ಬೇಕಾದ ಎಲ್ಲ ಅನುಕೂಲತೆಗಳನ್ನೂ ಆನಂದ-ಅಭಿಮಾನಗಳಿಂದ ಒದಗಿಸಿ ಕೊಟ್ಟೆನೆಂದು ಬೇರೆ ಹೇಳಬೇಕಾಗಿದೆಯೆ ?

ಅಂದು ಸಾಯಂಕಾಲ ಹಳ್ಳಿಯ ಜನರನ್ನು ಒಟ್ಟುಗೂಡಿಸಿ, ಸಭೆ ಮಾಡಿ, ಬಂದಿದ್ದವರ ಬಾಯಿಂದ ‘ಬಡವಿಯ ಬಾವಿ’ಯ ತಿಮ್ಮಬ್ಬೆಯ ಕತೆಯನ್ನು ಎಲ್ಲರಿಗೂ ಹೇಳಿಸಿದೆ. ನಮ್ಮ ಹಳ್ಳಿಯಲ್ಲಿ ಹೆಚ್ಚು ಜನರ ವಸತಿಯೆಂದರೆ ರಡ್ಡಿಯರದು. ಅವರು ತಿಮ್ಮಬ್ಬೆಯ ಕತೆಯನ್ನು ಕೇಳಿ ಹೆಮ್ಮೆಯಿಂದ ಹಿಗ್ಗಿದರು.

* * * *

ನಮ್ಮೂರಿಗೆ ಅಂದು ಬಂದಿದ್ದ ಆ ಇತಿಹಾಸಸಂಶೋಧಕರು, ತಮ್ಮ ಆ ಐತಿಹಾಸಿಕ ಮಹತ್ವದ ಕಾಗದವನ್ನು ಇನ್ನೂ ಪ್ರಕಟಿಸಿದ್ದಾರೋ ಇಲ್ಲವೋ ಗೊತ್ತಿಲ್ಲ. ಅವರು ಎಂದೇ ಪ್ರಕಟಿಸಲೊಲ್ಲರೇಕೆ ! ನಮ್ಮೂರ ಬಡವಿಯ ಬಾವಿಯ ಇತಿಹಾಸ, ಕನ್ನಡಿಗರಿಗೆಲ್ಲ ಗೊತ್ತಾಗಬೇಕೆಂಬ ಹಂಬಲ

ದಿಂದ, ನನಗೆ ಬಂದ ಭಾಷೆಯಲ್ಲಿ ಇದನ್ನು ಬರೆದು, ಲೋಕದ ಕಣ್ಣೆದುರು ಇರಿಸುವ ನನ್ನ ಕರ್ತವ್ಯವನ್ನು ನಾನು ಮಾಡಿದ್ದೇನೆ. ಇನ್ನೊಂದು ಸಂಗತಿ–ಯೆಂದರೆ: ನಮ್ಮ ಹಳ್ಳಿಯ ಜನರೆಲ್ಲ ಕೂಡಿ, ತಿಮ್ಮಬ್ಬೆಯ ಮೂರ್ತಿಯನ್ನು ಕಲ್ಲಿನಲ್ಲಿ ಕಡೆಯಿಸಿದ್ದಾರೆ; ನಾಳೆಯ ದೀವಳಿಗೆಯ ಪ್ರತಿಪದೆಯ ಶುಭ–ಮುಹೂರ್ತದಲ್ಲಿ, ಅದರ ಪ್ರತಿಷ್ಠಾಪನೆಯ ಉತ್ಸವವನ್ನು ಮಾಡಬೇಕೆಂದಿ-ದ್ದಾರೆ. ಅಂದು ಬಂದಿದ್ದ ಇತಿಹಾಸಸಂಶೋಧಕರನ್ನೂ ಕರೆಯಿಸಿಕೊಳ್ಳ-ಬೇಕೆಂದಿದ್ದೇವೆ. ಬಿಡುವು ಇದ್ದರೆ ನೀವು ಕೂಡ ಬಂದು ನಮ್ಮೂರ ಬಡವಿಯ ಬಾವಿಯನ್ನು ನೋಡಿಕೊಂಡು ಹೋಗಬಹುದು. ತಿಮ್ಮಬ್ಬೆಯ ಪುಣ್ಯದರ್ಶ-ನವೂ ನಿಮಗೆ ದೊರೆಯುವುದು.

# ವೀರಮಾನ್ಯ

## ೧

ನಮ್ಮ ಕನ್ನಡ ನಾಡಿನ ಜನಸಾಮಾನ್ಯರ ಜೀವನಪರಂಪರೆಯಲ್ಲಿ, ಹಲವು ಸಂಸ್ಮರಣೀಯ ಘಟನೆಗಳು ಮಾತ್ರ ಪ್ರಾಮುಖ್ಯ ಪಡೆದಿರುವುವಲ್ಲದೆ, ಅವು ಘಟಿಸಿದ ವರ್ಷ, ತಿಂಗಳು, ದಿನಾಂಕಗಳಿಗೆ ಪ್ರಾಮುಖ್ಯವಿರುವುದಿಲ್ಲ. ನಾನೀಗ ವಿವರಿಸಬೇಕಾಗಿರುವ ಸಂಗತಿಯ ಕಾಲವನ್ನೇ ಹೇಳಬೇಕಾದರೆ, ವಿಜಯನಗರದ ಪತನಾನಂತರದ ಮೊದಲನೆಯ ದಶಕವೋ ಎರಡನೆಯ ದಶಕವೋ ಇರಬಹುದೆಂದು ಸ್ಥೂಲವಾಗಿ ಹೇಳಬಹುದು— ಇಷ್ಟೆ. ಉತ್ತರ ಕರ್ನಾಟಕದ ಪ್ರದೇಶವೆಲ್ಲ ಆಗ ವಿಜಾಪುರದ ಬಾದಶಹರ ಅಧೀನಕ್ಕೆ ಸೇರಿ-ಬಿಟ್ಟಿತ್ತು. ಪರಕೀಯರ ಆಡಳಿತಕ್ಕೆ ಒಳಗಾಗಿದ್ದರೂ ನಾಡಿನಲ್ಲಿಯ ಕ್ಷಾತ್ರ-ವೃತ್ತಿ, ಸ್ವ-ಸಂಪ್ರದಾಯನಿಷ್ಠೆಗಳು ಇನ್ನೂ ಜಾಗೃತವಾಗಿಯೇ ಇದ್ದುವು.

'ಗೋಕಾಗೆ' ನಾಡಿನಲ್ಲಿ 'ಕುರುಂಬೆಟ್ಟ' ಒಂದು ಹಿರಿಯೂರು. ಹಲಸಿಗೆಯ ಕದಂಬರು, ಕಲ್ಯಾಣದ ಚಾಲುಕ್ಯರು, ಸವದತ್ತಿಯ ರಟ್ಟರು, ವಿಜಯನಗರದವರು— ಇವರೆಲ್ಲರ ಕಾಲದಲ್ಲಿಯೂ ಕುರುಂಬೆಟ್ಟ ಒಂದು ಆಯಕಟ್ಟಿನ ಕೋಟೆಯೆಂದು ಪ್ರಸಿದ್ಧಿ ಪಡೆಯುತ್ತ ಬಂದಿದ್ದಿತು. ಆ ಆ ರಾಜರುಗಳ ಅಧೀನದಲ್ಲಿ ಈ ಕೋಟೆಯಿರುವಾಗ, ಚಿಕ್ಕದಂಡಿನ ಪಾಳೆಯವನ್ನು ಇರಿಸಿಕೊಂಡು, ಪ್ರಾದೇಶಿಕ ಭದ್ರತೆಯನ್ನು ಕಾಯುವ ಕೆಲಸವನ್ನು ಈ ಹಿರಿ-ಯೂರು ಮಾಡುತ್ತಿದ್ದಿತು. ವಿಜಯನಗರದ ಪತನಾನಂತರ, ಖಾನ್ ಮಹ-ಮ್ಮದ್ ಅಸದ್‌ಖಾನ್ ಎಂಬ ಒಬ್ಬ ಸರದಾರ, ಈ ಕೋಟೆಯ ಅಧಿಕಾರಿ-ಯಾಗಿ ಬಂದಿದ್ದ. ಇವನ ಅಧಿಕಾರದ ಪರಿಣಾಮವಾಗಿ 'ಕುರುಂಬೆಟ್ಟ'ದ ಕನ್ನಡ ಹೆಸರು ಹೋಗಿ, 'ಮಹಮ್ಮದಾಪುರ' ಎಂಬ ವಿಜಾತೀಯ ಹೆಸರು ಬಂದುಬಿಟ್ಟಿತ್ತು. ಹೀಗೆ ಹೆಸರು ಮಾರ್ಪಟ್ಟ ಹೊಸದರಲ್ಲಿಯೆ ನಡೆದ ಘಟನೆ-ಯೊಂದನ್ನು ಕುರಿತೇ ನಾನೀಗ ಹೇಳಬೇಕೆಂದಿದ್ದೇನೆ.

ಇದೊಂದು ರಾಜ-ಮಹಾರಾಜರ ಜೀವನದಲ್ಲಿ ನಡೆದ ಘಟನೆ-ಯಾಗಿದ್ದರೆ, ನಮ್ಮ ನಾಡಿನ ಇತಿಹಾಸದ ಮಹತ್ವದ ಪುಟಗಳಲ್ಲಿ ಮೂಡಿ ನಿಲ್ಲಬಹುದಾಗಿತ್ತು; ಆದರೆ ಜನಸಾಮಾನ್ಯರ ಜೀವನದಲ್ಲಿ ಘಟಿಸಿದ ಸಂಗತಿ. ಇದನ್ನು ಯಾರು ಬರೆದಿಡುವವರು? ಆದರೆ ನಮ್ಮ ನಾಡಿಗರ ನೆನಹು ಈ ಸಂಗತಿಯನ್ನು ಮರೆತು ಬಿಡಲಿಲ್ಲ; ತಲೆಮಾರಿನಿಂದ ತಲೆಮಾರಿಗೆ ಮುಂದುವರಿ-ಸುತ್ತ, ಈ ಘಟನೆಯ ಮಹತಿ ಜೀವಂತವಾಗಿ ಉಳಿಯುವಂತೆ ಮಾಡಿದೆ

ಕುರುಂಜಿಟ್ಟದಿಂದ ಎಡಮೂಡಣಕ್ಕೆ, ಹನ್ನೆರಡು ಮೈಲು ದೂರದಲ್ಲಿ 'ಹೊನ್ನಕುಪ್ಪೆ' ಎಂಬ ಹಳ್ಳಿ ಇದೆ. ಅಲ್ಲಿಯ ಗೌಡ ಜಟ್ಟಿನಾಯಕನ ಬಂಟ-ತನದ ಮೂಲಕ, ಆ ಹಳ್ಳಿಯ ಹೆಸರು ಸುತ್ತಣ ನಾಡವರಿಗೆಲ್ಲ ಆಗ ಪರಿಚಯದ್ದಾಗಿತ್ತು. ಅರುವತ್ತು ವರ್ಷದ ವಯಸ್ಸಿನವನಾದರೂ ಹೊಸ ಹರಯದವರನ್ನು ಮೀರಿಸುವ ಹುರುಪು ಜಟ್ಟಿನಾಯಕನಲ್ಲಿ. ಆತನ ಗರಡಿ-ಯಾಡಿದ ಹುರಿಮೈ, ಭವ್ಯವಾದ ನಿಲುವು, ಸಿಂಹದ ಆಯಾಲನ್ನು ಸ್ಮರಣೆಗೆ ತಂದುಕೊಡುವ ಕುರುಳು-ಗಲ್ಲಮೀಸೆಗಳು, ಗಂಡುಗಾಸೆಯ ಉಡಿಗೆ, ಕಸೆಯ ಉದ್ದಂಗಿ, ಮುರಿಗೆಯ ಮುಂಡಾಸದ ಕಟ್ಟು. ಬೆನ್ನಿಗೆ ಬಿಗಿದ ಢಾಲು, ಸೊಂಟದಲ್ಲಿ ತೂಗಾಡುವ ಡೊಂಕುಗತ್ತಿ. ಕುದುರೆ ಏರುವ ರೀತಿ— ಇವುಗಳನ್ನೆಲ್ಲ ಅವರ ಮನೆತನದ ಹೇಳವ (ಹೆಳವ)ರು ಇನ್ನೂ ಒಕ್ಕಣಿಸಿ ಹಾಡುತ್ತಿರುತ್ತಾರೆ. ಜಟ್ಟಿನಾಯಕನೊಂದಿಗೆ ಹಗೆ ಬೆಳಸಿ ಬದುಕಿದವರಿಲ್ಲ; ಆದುದರಿಂದಲೇ ಸುತ್ತಣ ಗ್ರಾಮದ ಗೌಡರೆಲ್ಲ ಅವನ ಕೆಳೆಯನ್ನು ಬಯಸುವರು. ಅವನ ಬೆರಳ ಸನ್ನೆಯಂತೆ ನಡೆಯಲು ಸನ್ನದ್ಧರಾಗಿರುವರು.

ಹೊನ್ನಕುಪ್ಪೆಯ ದಕ್ಷಿಣದ ಸೀಮೆ, 'ಬಿಲ್ಲುಕುಂದಿ' ಎಂಬ ಗ್ರಾಮದ ಉತ್ತರದ ಮೇರೆಯಾಗಿದ್ದಿತು. ಜಟ್ಟಿನಾಯಕನ ಹದಿನಾರು ಕೂರಿಗೆಯ 'ಹುಲುಸಿನ ಹೊಲ' ಹೊನ್ನಕುಪ್ಪೆಯ ದಕ್ಷಿಣದ ಗಡಿಯುದ್ದಕ್ಕೂ, ಚಾಚಿ-ಕೊಂಡಿತ್ತು. ಅದಕ್ಕೆ ಹೊಂದಿಕೊಂಡು, ಬಿಲ್ಲುಕುಂದಿಯ ಉತ್ತರದ ಎಲ್ಲೆ-ಯುದ್ಧಕ್ಕೂ, ಆ ಹಳ್ಳಿಯ ಮಲ್ಲಿಗೆಗೊಂಡರ 'ಸೀಮೆಯ ಹೊಲ' ನೀಡಿ-ಕೊಂಡಿತ್ತು.

ಬಿಲ್ಲುಕುಂದಿಯ ಮಲ್ಲಿಗೆಗೊಂಡನೇನೂ ಕಡಿಮೆಯವನಲ್ಲ. ಹಲವು ಸಲ ಕಾಳೆಗಕ್ಕೆ ಹೋಗಿ, ಮೇಲಾಳಾಗಿ ಕಾದಾಡಿದವ. ಆದರೆ ಒಂದು ಸಲದ ಕಾಳೆಗದಲ್ಲಿ, ಕತ್ತಿಯೇಟು ಬಿದ್ದು, ತೊಡೆಯ ವರೆಗಿನ ಬಲಗಾಲು ಕಡಿದುಹೋದುದರಿಂದ ಅನಿವಾರ್ಯವಾಗಿ ಅವನು ಮೂಲೆ ಹಿಡಿದು ಕುಳಿತು ಕೊಳ್ಳಬೇಕಾಗಿತ್ತು.

ಜಟ್ಟಿನಾಯಕ, ಮಲ್ಲಿಗೆಗೊಂಡ ಇಬ್ಬರೂ ಸಮಾನ ವಯಸ್ಸಿನವರು. ಹೊಂದಿಕೊಂಡು ಇದ್ದ ಸೀಮೆಯ ಹೊಲಗಳ ಮೂಲಕ, ಇಬ್ಬರ ಮನಸಗಳಲ್ಲಿ ಅಷ್ಟೊಂದು ಹೊಂದಿಕೆಯಿರಲಿಲ್ಲ. ಆಗಾಗ ಸಣ್ಣ-ಪುಟ್ಟ ಜಗಳಾಟಗಳೂ ನಡೆಯುತ್ತಿದ್ದವು. ಇಬ್ಬರೂ ಸಮಹುದ್ದರಿಗಳಾದುದರಿಂದ, ಎರಡೂ ಪಕ್ಷದವರ ಸೀಮೆಯ ಒತ್ತಾಟ, ಯಾರ ಸೀಮೆಯನ್ನೂ ಯಾರೂ ಅತಿಕ್ರಮಿಸದಂತೆ ಮಾಡಿತ್ತು: ಆದರೆ ಆ ಇಬ್ಬರೂ ಗೌಡರಲ್ಲಿ ಬೆಳೆಯುತ್ತಿದ್ದ ಅಸಹನೆ ಮಾತ್ರ ಸೀಮೆಯನ್ನು ಮೀರುತ್ತ ನಡೆದಿತ್ತು. ಇಂತಹ ವೇಳೆಯಲ್ಲಿ ಮಲ್ಲಿಗೆಗೊಂಡನ ಕಾಲು ಹೋಗಿ ಕುಂಟನಾದುದರಿಂದ, ಅವನ ಪಕ್ಷದ ಬಲವು ಕಡಮೆಯಾದಂತಾಯಿತು. ಜಟ್ಟಿನಾಯಕನ ಕಮತಿಗರು ವರುಷ-ವರುಷಕ್ಕೂ ಬಿಲ್ಲುಕುಂದಿಯ ಸೀಮೆಯನ್ನು ಹಿಂದು-ಹಿಂದಕ್ಕೆ ಸರಿಸಲು ತೊಡಗಿದರು. ಇದರಿಂದ ಮಲ್ಲಿಗೆಗೊಂಡನ ಮನದೊಳಗೆ ಉರಿಯೆದ್ದಿತು. ಆದರೆ ಎದ್ದು ಊರಿ ಒಮ್ಮೆಲೆ ಕಾರ್ಯಮಾಡುವಂತಿರಲಿಲ್ಲ. ಹಿರಿಯ ಮಗ ಹುಲಿಯಣ್ಣನಿಗೆ ಇನ್ನೂ ಎಳವಯಸ್ಸು. ಆದುದರಿಂದಲೇ ಅವನು ಒಳಗೊಳಗೆಯೇ ಕುದಿಯುತ್ತ— ಅನುಕೂಲ ಕಾಲಕ್ಕಾಗಿ ಕಾಯುತ್ತಿದ್ದನು.

ಇದೇ ವೇಳೆಯಲ್ಲಿ, ಮಲ್ಲಿಗೊಂಡನ ಮನದುರಿಯನ್ನು ಹೆಚ್ಚಿಸುವಂತಹ ಸಂದರ್ಭ, ಇನ್ನೊಂದು ಒದಗಿ ಬಂದಿತು. ಕುರುಂಬೆಟ್ಟದ ಗೋವಿಗೊಂಡ, ತನ್ನ ಹಿರಿಯ ಮಗಳು ಚಿನ್ನಬ್ಬೆಯನ್ನು, ಮಲ್ಲಿಗೆಗೊಂಡನ ಮಗ ಹುಲಿಯಣ್ಣನಿಗೆ ಕೊಡುವುದಾಗಿ ಮೊದಲಿನಿಂದಲೂ ಹೇಳುತ್ತ ಬಂದಿದ್ದ. ಆ ಮಾತಿಗೆ ಸರಿಯಾಗಿ, ಹುಲಿಯಣ್ಣನನ್ನು ಮೂರು-ನಾಲ್ಕು ಸಲ ತನ್ನಲ್ಲಿಗೆ ಕರೆಯಿಸಿಕೊಂಡು ಔತಣ ಮಾಡಿಸಿ, ಸಂಬಂಧವನ್ನು ಹೆಚ್ಚಿಸಿಕೊಂಡಿದ್ದ. ಮಲ್ಲಿಗೆಗೊಂಡನೂ ನಾಗಪಂಚಮಿಗೊಮ್ಮೆ ದಂಡೆ-ಕುಪ್ಪಸ, ಉಂಗುರ ಉಡುಗೊರೆ ಕಳುಹುತ್ತ ಬಂದಿದ್ದ.

ಚೆಲುವೆಯಾದ ಚಿನ್ನಬ್ಬೆಯನ್ನು ಹುಲಿಯಣ್ಣ ಕಣ್ಣಾರೆ ಕಂಡು, ಒಲಿದು ಒಪ್ಪಿಕೊಂಡಿದ್ದ. ಹಾಗೆಯೇ ಚಿನ್ನಬ್ಬೆಯ ಕಣ್ಮನಗಳೂ ಹುಲಿಯಣ್ಣನಿಗೆ ಮೆಚ್ಚಿ ಸೋತಿದ್ದುವು. ಮದುವೆಯ ಮಾತು ಅಷ್ಟರ ವರೆಗೆ ಮುಂಬರಿದಿದ್ದರೂ, ಕಾಲು ಕುಂಟಾಗಿ ಮಲ್ಲಿಗೆಗೊಂಡನ ಗರುವಿಕೆಯ ಪರಡಿ ಹಗುರಾದುದನ್ನು ಕಂಡು, ಗೋವಿಗೊಂಡ ಕೊಟ್ಟಮಾತನ್ನು ಮುರಿದುಬಿಟ್ಟ; ಹೊನ್ನಕುಪ್ಪೆಯ ಜಟ್ಟನಾಯಕನ ಮಗ ಬೆಳ್ಳಿನಾಯಕನಿಗೆ ಮಗಳನ್ನು ಕೊಟ್ಟು ವಿಜೃಂಭಣೆಯಿಂದ ಮದುವೆಮಾಡಿದ. ಸಂಪ್ರದಾಯದಂತೆ ಮದುವೆಯ ಔತಣ ಬಂದಿದ್ದಿತಾದರೂ, ಮಲ್ಲಿಗೆಗೊಂಡನ ಮನೆಯವರು ಯಾರೂ ಮದುವೆಗೆ ಹೋಗಲಿಲ್ಲ. ಅಪಮಾನದ ಕಿಚ್ಚು ಮಲ್ಲಿಗೆಗೊಂಡನ ಎದೆಯಲ್ಲಿ ನಿಗಿನಿಗಿಗೊಂಡಿತು. ಹುಲಿಯಣ್ಣನ ಹೃದಯದಲ್ಲಿ ಬೆಳೆದ ಒಲವಿನ ಸೂತ್ರ ಹರಿದುಹೋಯಿತು. ಹೊಟ್ಟೆಯಲ್ಲಿಯ ಸಿಟ್ಟು ರಟ್ಟೆಯಲ್ಲಿ ಇಲ್ಲದಂತಾದ ಮಲ್ಲಿಗೆಗೊಂಡ, ಒಂದು ದಿನ ಮಗನನ್ನು ಮುಂದೆ ಕರೆದು ಕುಳ್ಳಿರಿಸಿಕೊಂಡು ಮಾತನಾಡಿದ :

"ಇದು ನೋಡು ಹುಲಿಗ, ಇಂದಿಗೆ ನಮ್ಮ ಮನಿತನದ ಹಿರೇರ ಪುಣ್ಯೇ ತೀರಿದಾಂಗಾತು. ನಮ್ಮ ಹಿರಿ–ಹಿರ್‍ಯಾರೆಲ್ಲಾ ಮೆರೆದಾಡಿದ ಹೊಲದ ಸೀಮೀನ, ನನ್ನ ಒಬ್ಬ ವೈರಿ ಹಿಂದಕ್ಕ ಒತ್ತಿ ಬಿಟ್ಟಾನ. ಮನಿತನಕ್ಕ ಸೊಸೀ ಆಗಿ ಬರೂ ಮಾದೇವಿ, ವೈರಿಯ ಮನಿತನಾ ತುಂಬಲಾಕ ಹೊಂಟುಬಿಟ್ಟಳು. ಇನ್ನ ಏನು ಉಳದ್ಹಾಂಗಾತು ?"

"ಅಪ್ಪಾಜೀ, ನೀವೇನೂ ಚಿಂತೀ ಮಾಡಬ್ಯಾಡ್ರಿ. ಈ ಮನಿತನಕ್ಕ ಮಗಾ ಆಗಿ ನಾನು ಹುಟ್ಟಿ ಬಂದೀನಿ. 'ಹುಲಿಯಣ್ಣಾ' ಅಂತ ನೀವು ಹೆಸರಿಟ್ಟು ಕೂಗಿತೀರಿ ! ಹುಲೀಮರೀ ಎಂದೂ ನರೀಕುನ್ನಿ ಆಗಲಾರದು ಅಪ್ಪಾಜಿ ! ಈ ಮುಯ್ಯಿಗೆ ಮೂರುಪಾಡಿಯಾಗಿ ಮುಯ್ಯಿ ಮುಟ್ಟಿಸದಿದ್ದರ, ನಾನು ಮಲ್ಲಿಗೆಗೊಂಡರ ಮಗಾ ಅಂತ ಹೇಳಬೇಕು ಯಾಕ ?"

"ಭಲಾ ಹುಲಿಯಣ್ಣಾ, ನನ್ನ ಮಗಾ ಹ್ಯಾಂಗ ಮಾತಾಡಬೇಕೋ ಹಾಂಗ ಮಾತಾಡಿದಿ. ಬಿಲ್ಲುಕುಂದೀ ಗೌಡರ ಮಾನಾ–ಅಪಮಾನದ ಹೊರಿ ಈಗ ನಿನ್ನ ತಲೀ ಮ್ಯಾಗ ! ಆ ಕುರುಂಬೆಟ್ಟದ ಕುರಿ ಗೋವಿಗೊಂಡನ

ಮೂಗು ಕೊಯ್ಯಬೇಕು; ಈ ಹೊನ್ನಕುಪ್ಪೀ ಜಟ್ಟಿಗನ ಬಲಗೈ ತುಂಡರಿಸ-ಬೇಕು. ಇದು ನಿನ್ನ ಕಡೆಯಿಂದ ಆದೀತೇನು ?"

"ಹೀಂಗೇನ ಕೇಳತೀರಿ ಅಪ್ಪಾಜಿ ! ನಿಮ್ಮ ಇಚ್ಛೇನS ನನ್ನ ಇಚ್ಛೆ. ನೀವು ಮಾಡೂ ಅಂದದ್ದು ಮಾಡತೀನಿ. ನಿಮ್ಮ ಮನಸಿನಂತೆ ಕೆಲಸ ಕೈಗೂಡೂ ತನಕಾ ನನಗ ಮನೀ ಬ್ಯಾಡಾ ! ಮದಿವಿ ಬ್ಯಾಡಾ, ಬದುಕು–ಬಾಳ್ವೆ ಬ್ಯಾಡಾ........ಏನೇನೂ ಬ್ಯಾಡ ! ಮುಯ್ಯಿಗೆ ಮುಯ್ಯಿ ತೀರಿಸೂದು ಮೊದ-ಲನೆ ಮಾತು !"

"ಶಾಬಾಸ್ ! ಹುಲಿರಾಯ ಆಗಿ ಒಂದS ಒಂದು ದಿನ ಬದಿಕಿದರ ಸಾಕು ! ಹದ್ದು ಆಗಿ ಹೆಣಾ ತಿನ್ನತS— ಸತ್ತಸಾವಿರ ವರಸ ಬದಿಕಿದರೂ ಏನು ಆದ್ಹಾಂಗ ಆತು ? ಆಗಲಿ, ಹುಲಿಗ ! ತಾಯಿ ಬಿಲ್ಲುಕುಂದವ್ವ ನಿನಗ ಹುಲೀ ಬಲಾ ಕೊಡಲಿ; ಆಡಿದ ಮಾತನ್ನ ನಡಸಿಕೊಡಲಿ !"

ಮುದುಕ ಹಿಗ್ಗಿದೆದೆಯಿಂದ, ಬಿಗಿದ ಕೊರಳಿನಿಂದ ಮಗನ ಬೆನ್ನಮೇಲೆ ಕೈಯನ್ನಾಡಿಸಿ ಹರಸಿದ. ಅಂದೆಯೇ ಮನೆಬಿಟ್ಟ ಹುಲಿಯಣ್ಣ, ಸೀಮೆಯ ಹೊಲದಲ್ಲಿ ಗುಡಿಸಲು ಕಟ್ಟಿಕೊಂಡು ಅಲ್ಲಿಯೇ ಇರಲು ತೊಡಗಿದ. ಓರಗೆಯ ತರುಣರನ್ನು ಸೇರಿಸಿ, ಗರಡಿಮನೆಯನ್ನು ಬೆಳಸಿದ. ಇಪ್ಪತ್ತೊಂದು ವರುಷದ ಏರುವರಯ, ಸುಂದರವಾದ ಗಂಡುಗಾಡಿಯ ಮುಖ, ವ್ಯಾಯಾಮದಿಂದ ಹುರಿಗೊಳ್ಳುತ್ತಿರುವ ಮೈ, ಹರವಾದ ಎದೆ, ವ್ರತಬದ್ಧನಾಗಿ ಬಿಟ್ಟ ತಲೆ-ಗೂದಲು, ಅಂದವಾದ ಎಳೆಯ ಗಡ್ಡ–ಮೀಸೆಗಳು. ನೋಡಿದವರು ವನವಾಸ ದಲ್ಲಿದ್ದ ಲಕ್ಷ್ಮಣನನ್ನು ನೆನೆದುಕೊಳ್ಳುವಂತೆ ಕಾಣುತ್ತಿದ್ದ ಹುಲಿಯಣ್ಣ.

ಈತನ ಪ್ರತಿಜ್ಞೆ, ನಿಃಸಂಗವೃತ್ತಿ— ಇವುಗಳ ವರ್ತಮಾನ, ಹೊನ್ನ-ಕುಪ್ಪೆಯವರಿಗೆ ತಿಳಿಯದಿರುವುದೆ ? ಜಟ್ಟಿನಾಯಕನಂತಹ ಗಟ್ಟಿಗನ ಗುಂಡಿ-ಗೆಯೂ ಆಗಾಗ ಡಡದಡಿಸಲು ತೊಡಗಿತು. ಎಲ್ಲಿಗಾದರೂ ಹೊರಪಯಣ ಹೋಗಬೇಕಾಗಿ ಬಂದಾಗ, ಆತ ಸಾಕಷ್ಟು ಜಿಂಗಾವಲಿಲ್ಲದೆ ಹೊರಬೀಳುತ್ತಿರ-ಲಿಲ್ಲ. ಮಲ್ಲಿಗೆಗೌಡನ ಕವಡಿಗರು, ಹೊಲದ ಸೀಮೆಯನ್ನು ಹಿಂದಕ್ಕೆ ಸರಿಸಿ ಸೇಗಿಲನ್ನು ಸಾಗಿಸಿದರೂ, ಹೊನ್ನಕುಪ್ಪೆಯವರು ಉಸಿರನ್ನು ಎತ್ತದೆ ಇದ್ದುಬಿಟ್ಟಿದ್ದರು.

ಕುರುಂಬೆಟ್ಟದ ಗೋಪಿಗೌಡ ಹುಲಿಯಣ್ಣನ ಪ್ರತಿಜ್ಞೆಯ ಸುದ್ದಿಯನ್ನು ಕೇಳಿ, ಕ್ಷಣಕ್ಷಣಕ್ಕೂ ಬೆಚ್ಚಿ ಬೀಳಲಾರಂಭಿಸಿದ. ಹೇಡಿಯಾದ ಅವನು, ಜೀವದ ಅಂಜಿಕೆಗಾಗಿ, ತಮ್ಮ ಊರಲ್ಲಿದ್ದ— ಸೈನ್ಯದ ಸಣ್ಣ ಅಧಿಕಾರಿ— ಮರ್ದಾನ್‌ಖಾನನಲ್ಲಿ ಮೊರೆಯಿಟ್ಟ. ಸ್ನೇಹ-ಸಲುವಳಿಗಳನ್ನು ಬಳೆಯಿಸತೊಡಗಿದ. ಮರ್ದಾನ್‌ಖಾನನಿಂದ ಗೋಪಿಗೌಡನಿಗೆ ಸಂಪೂರ್ಣ ಸಂರಕ್ಷಣೆಯ ಭರವಸೆ ದೊರೆಯಿತು. 'ಹುಲಿಯಣ್ಣ ಕುರುಂಬೆಟ್ಟದ ಎಲ್ಲೆಯಲ್ಲಿ ಕಾಲಿಕ್ಕದಂತೆ ನಾನು ನೋಡಿಕೊಳ್ಳುತ್ತೇನೆ!' ಎಂದವನು ಎದೆಯ ಮೇಲೆ ಕೈಯಿಟ್ಟು ಹೇಳುತ್ತಿದ್ದ. ಇಬ್ಬರಲ್ಲಿಯೂ ದಿನದಿನಕ್ಕೆ ಸ್ನೇಹ ಸಂಬಂಧ ಹೆಚ್ಚಾಗಲು ತೊಡಗಿತು. ಖಾನನು ಆಗಾಗ ಗೋಪಿಗೌಡನ ಮನೆಗೆ ಹೋಗಿಬರಲಾರಂಭಿಸಿದ. ಸೇನಾಪತಿಯೊಬ್ಬ ತನ್ನ ಮನೆಗೆ ಬಂದು ಹೋಗುತ್ತಿರುವನೆಂದು, ಗೋಪಿಗೌಡನಿಗೆ ಹಿಡಿಸಲಾರದಷ್ಟು ಹಿಗ್ಗು-ಹೆಮ್ಮೆಗಳು.

## ೨

ಇದ್ದುದಿದ್ದ ಹಾಗೆಯೇ ಒಂದು ದಿನ, ಗೋಪಿಗೌಡರ ಮನೆಯಾಳು ಕಪ್ಪಣ್ಣ ಹೊನ್ನಕುಪ್ಪೆಗೆ ಬಂದ. ಜಟ್ಟಿನಾಯಕನನ್ನು ಎಕ್ಕಟಿಯಾಗಿ ಕಂಡ. ಬಾಡಿ ಬತ್ತಿದ ಕಪ್ಪಣ್ಣನ ಮೊಗವನ್ನು ನೋಡಿ ಜಟ್ಟಿನಾಯಕ ಬೆಚ್ಚಿಬಿದ್ದು ಕೇಳಿದ:

"ಇದೇನಪಾ, ಕಪ್ಪಣ್ಣಾ! ಸುದ್ದಿಲ್ಲಾ, ಸಂಗತಿಲ್ಲಾ, ಒಮ್ಮಿಗಿಲೇನs ಬಂದು ಬಿಟ್ಟಿ? ಕುರುಂಬೆಟ್ಟದ ಸಮಾಚಾರ, ಎಲ್ಲಾ ಪಾಡಾಗಿ ಐತೆ?"

ಕಪ್ಪಣ್ಣ ಒಣಗಿದ ಕಂಠದಿಂದ ಮೆಲ್ಲಗೆ ಹೇಳಲಾರಂಭಿಸಿದ:

"ಪಾಡಂತ ಏನ ಹೇಳಲಿ ನನ್ನ ಒಡ್ಯಾ? ಎಲ್ಲಾ ಮಾತೂ ಯಿಪರೀತಕ್ಕs ಇಟ್ಟೈತಿರಿ! ಈಗ ಯಾರಿಗೂ ಗೊತ್ತಾಗದ್ಹಾಂಗ ಗೌಡಶಾನಿ ನನ್ನ ಇಲ್ಲಿಗೆ ಕಳಿಸಿಕೊಟ್ಟಾರ್ರಿ!"

ಜಟ್ಟಿನಾಯಕನ ಗಂಡುಗೆಚ್ಚಿನ ಎದೆಯೂ ನಡುಗಿತು; ಒಮ್ಮೆಲೆ ಕೇಳಿದ :

"ಮತ್ತೇನು ಆತೋ ಕಪ್ಪಣ್ಣಾ ? ಗೋಪಿಗೊಂಡರು ಆರಾಮಾಗಿ ಇದ್ದಾರ ಹೌದಲ್ಲೊ ? "

" ಅವರ ಆರಾಮ ತೊಗೊಂಡು ಏನು ಸುಡೂದೈತಿರಿ ? ನಿಮಗ ಒಂದು ಮರ್ಮದ ಸುದ್ದೀ ಮುಟ್ಟಿಸಿ ಹೋಗಬೇಕಂತ........ನಾ ಈಗ ಹಾತೊರದು ಬಂದದ್ದು ! ನಾಳೆ ಒಂದು ದಿನ ದಾಟಿದರ, ನಿಮ್ಮ ಸೊಸೀ ಚಿನ್ನಬ್ಬಿ....ನಿಮ್ಮ ಕೈಗೆ ಹತ್ತೂಹಾಂಗs ಇಲ್ಲರಿ ! "

" ಇದೇನ ಮಾತಾಡತೀಯೋ ಕಪ್ಪಾ ? ಚಿನ್ನಬ್ಬಿಗೆ ಏನಾದರೂ ಬ್ಯಾನಿ-ಗೀನಿ ಬಂದೈತ್ಯೋ ಏನು ? "

" ಹಂತಾ ಹಿಂತಾ ಬ್ಯಾನಿ ಅಲ್ಲಾ ಒಡ್ಯಾ ? ಎಲ್ಲಾರ ಮಾರಿಗೂ ಮಸಿ ಹಚ್ಚುವಂತಾ ಹಿರಿಬ್ಯಾನಿ ಗಂಟುಬಿದ್ದೈತಿರಿ. ಹ್ಯಾಂಗಾದರೂ ಮಾಡಿ, ನಾಳೆ ಬೆಳಗಾಗೂದರೊಳಗs....ಆ ಹೆಣ್ಣುಮಗಳನ್ನ ಇಲ್ಲಿಗೆ ಕರತಂದಿರೀ— ನಿಮ್ಮ ಸೊಸಿ ನಿಮ್ಮ ಕೈಗೆ ಸಿಗತಾಳ. ಒಂದs ಚೂರು ತಡಾ ಮಾಡಿದರ, ಆ ಚಿನ್ನದ ಗೊಂಬಿಯಂತಾ ಚಿನ್ನಬ್ಬಿಗೆ ನೀವು ಕೊನೀತನಕಾ ಎರವಾಗೂ ಪರ-ಸಂಗ ಐತಿರಿ ! "

ಕಂಗೆಟ್ಟವನಾಗಿ ಜಟ್ಟಿನಾಯಕ ಕೇಳಿದ :

" ಹೀಂಗ ಯಾಕ ಒಡಪಿನಂತಾ ಮಾತು ಆಡಲಾಕ ಹತ್ತೀದಿ ? ಏನಿರೂ ಸಂಗತೀನ ಒಡದು ಹೇಳಬಾರದs.... ? "

ಕಪ್ಪಣ್ಣ ಪಿಸುಮಾತುಗಳಲ್ಲಿ ಏನೇನನ್ನೋ ಹೇಳಲು ತೊಡಗಿದ.

ಜಟ್ಟಿನಾಯಕ ಕ್ರೋಧ-ಸಂತಾಪಗಳ ಗೆರೆಗಳನ್ನು ಮುಖದ ಮೇಲೆ ಮೂಡಿಸಿಕೊಳ್ಳುತ್ತ ಕೇಳುತ್ತಲಿದ್ದ. ಕೇಳುತ್ತಲಿದ್ದ ಹಾಗೆಯೇ ಆವೇಶ-ಗೊಂಡು ಕೆಳದುಟಿಯನ್ನು ಕಚ್ಚಿದ. ಹೇಳುವುದನ್ನೆಲ್ಲ ಹೇಳಿ ಕೊನೆಗೆ ಕಪ್ಪಣ್ಣ ಗಟ್ಟಿಯಾಗಿ ಉಸುರಿದ:

" ಒಂದು ಮಾಡಲಾಕ ಹೋಗಿ ಇನ್ನೊಂದು ಮಾಡಿದಾಂಗ ಆಗೈತಿರಿ ! ಒಬ್ಬ ವೈರಿಯ ಹೆದರಿಕೀ ಸಲುವಾಗಿ, ಇನ್ನೊಬ್ಬ ವೈರಿನ್ನ ಕರದು ಮನೀ

ಹೋಗಿಸಿಕೊಂಡಾರ್ರಿ ! ಗೌಡರಿಗೆ ಇದರ ಅರವನೇ ಇಲ್ಲರೀ ! ಆ ದಳ-ವಾಯಿ ಏನೇನು ಆಶೇ ಹಚ್ಚ್ಯಾನೋ ಏನೋ: ಅಂವ ಹೇಳಿದಾಂಗ ಮಾಡ-ಲಾಕ ಗೌಡರು ತಯಾರ್ ಆಗಿ ನಿಂತಾರ್ರಿ ! ಆದಕ್ಕ ಗೌಡತಿ ಬಾಳ ಚಿಂತಿ-ಯೊಳಗ ಬಿದ್ದು, ಯಾರಿಗೂ ಗೊತ್ತಾಗದ ಹಾಂಗ, ತಮ್ಮ ಕಡೆ ನನ್ನ ಓಡಿಸಿ ಕಳಿಸಿದಾರ್ರಿ ! ”

ಜಟ್ಟಿನಾಯಕ ಕೆಲವೇಳೆ ಮುಂಗಾಣದವರಂತೆ ಕಂಗೆಟ್ಟು ಕುಳಿತ. ಸೋದರಮಾವನ ಮನೆಗೆ ಹೋಗಿದ್ದ ಜೆಳ್ಳಿನಾಯಕ ಮರಳಿ ಬರಲಿಕ್ಕೆ, ಮೂರು-ನಾಲ್ಕು ದಿನಗಳ ವಿಲಂಬವಿದ್ದಿತು. ಏನೇನನ್ನೋ ಆಲೋಚಿಸಿ, ಜಟ್ಟಿನಾಯಕ ತಟ್ಟನೆ ಹೇಳಿದ:

“ಕಪ್ಪಣ್ಣಾ, ನೀನು ಈಗಿಂದೀಗ ತಿರುಗಿ ಹೋಗಿ, ಗೌಡತಿಗೆ ಸುದ್ದೀ ಮುಟ್ಟಿಸು: ಹೊತ್ತು ಮುಳಿಗಿ ತಾಸು ರಾತ್ರಿ ಆಗೂದರೊಳಗ, ನಾನs ಸ್ವತs—ನಾಕುಜನ ಬಂಟರನ್ನ ಕರಕೊಂಡು, ಕೊಲ್ಲಾರಬಂಡಿ ಹೂಡಿಸಿ-ಕೊಂಡು ಬರತೇನಿ ! ಊರಿಂದ ಒಂದು ಮೈಲು ದೂರದ ಮ್ಯಾಗ, ಆಲದ ಮರ ಐತಿ ಅಲ್ಲಾ........ಅಲ್ಲಿ ಬಂಡೀ ತರಬಿಸಿಕೊಂಡು, ನಿಮ್ಮ ದಾರೀ-ಕಾಯತಿರತೇನಿ. ನೀನು ಸ್ವತ— ಯಾರಿಗೂ ತಿಳೀದ ಹಾಂಗ — ಚಿನ್ನಬ್ಬಿಗೆ ವೇಸಾ ಬದಲಿಸಿಕೊಳ್ಳಲಿಕ್ಕೆ ಹಚ್ಚಿ, ಗುಪ್ತರೀತಿಂದ ಕರಕೊಂಡು ಬಂದು ಬಿಡು. ಮುಂದಿನ ಕೆಲಸಾನೆಲ್ಲಾ ನಾವು ನೋಡಕೋತೇವಿ. ಆ ಮದರ್ಾನ ಕಾನ್ ಅಂಬಾಂವ, ಹ್ಯಾಂಗೂ ಕ್ಯಾಂಪಿನ ಮ್ಯಾಗ ಇರತಾನ. ಕೆಳಗ ಊರಾಗ ಗೌಡರ ಮನಿ. ತೊಂದರೇನೂ ಆಗಲಿಕ್ಕಿಲ್ಲ. ಆದರೂ ಆದಷ್ಟು ಎಚ್ಚರಕಿಂದ ನಡಕೋಬೇಕು ನಾವು ! ”

ಕುಡಿಯಲಿಕ್ಕೆ ನೀರನ್ನು ಕೇಳುವ ಎಚ್ಚರವೂ ಇಲ್ಲದೆ, ಕಪ್ಪಣ್ಣ ಮರಳಿ ಕುರುಂಬೆಟ್ಟದ ದಾರಿಯನ್ನು ಹಿಡಿದ.



ಕಪ್ಪಣ್ಣ ಚಿನ್ನಬ್ಬೆಯನ್ನು ಕರೆದುಕೊಂಡು ಬಂದಾಗ, ರಾತ್ರಿಯ ಒಂದು ಜಾವ ಮೀರಿ ಹೋಗಿತ್ತು. ಯಾವ ಅಡೆತಡೆಗಳೂ ಇಲ್ಲದೆ, ಸುರಕ್ಷಿತವಾಗಿ

ಮನೆಬಿಟ್ಟು ಸೂಚಿತ ಸ್ಥಳಕ್ಕೆ ಬಂದುದನ್ನು ಕಂಡು, ಜಟ್ಟಿನಾಯಕ ಸಮಾಧಾನದ ನಿಟ್ಟುಸಿರನ್ನು ಬಿಟ್ಟ, ಮೆಲ್ಲಗೆ ಹೇಳಿದ:

"ಹುಂ, ಇನ್ನ ತಡಾ ಕೂಡದು! ತಂಗೀ, ಈಗ ಹೆಚ್ಚಿನ ಯಾವ ಮಾತು-ಕತೀನೂ ಆಡಿಕೋತ ಹೊತ್ತು ಕಳೆಯೋಹಾಂಗಿಲ್ಲ. ಕೊಲ್ಹಾರೀ ಬಂಡಿ ಎತ್ತು ಜೂಡಿ ಅಣಿಯಾಗೇ ನಿಂತೈತಿ. ಗಡಾನ ಹತ್ತಿ ಕೂಡು ಒಳಗ!"

ಕೂಲಿಯವಳ ವೇಷದಲ್ಲಿದ್ದ ಚೆನ್ನಬ್ಬೆ, ಬಂಡಿಯಲ್ಲಿ ಹತ್ತಿಕುಳಿತಳು. ಬಂಡಿ ಮೆಲ್ಲಗೆ ಮುಂದುವರಿಯಿತು. ಎತ್ತಿನ ಕೊರಳಲ್ಲಿ ಗಂಟೆ, ಗೆಜ್ಜೆಸರ ಯಾವುದೂ ಇರಲಿಲ್ಲ. ಗಾಲಿಗಳ 'ದುಡುಕು ದುಡುಕು' ಶಬ್ದದ ಹೊರತು ಇನ್ನಾವ ಉಲಿವೂ ಕೇಳುವಂತಿರಲಿಲ್ಲ. ಬಂಡಿಯ ಹಿಂದೆ ಹಿಂದೆ, ಬಿಚ್ಚು-ಗತ್ತಿ ಹಿಡಿದು ನಾಲ್ಕು ಜನ ಕಾಪಿನ ಬಂಟರು ಸಾಗಿದ್ದರು. ಅವರ ಹಿಂದಿನಿಂದ ಕುದುರೆಯೇರಿಕೊಂಡು ಜಟ್ಟಿನಾಯಕ ನಡೆದಿದ್ದ.

ಕಗ್ಗತ್ತಲೆಯ ರಾತ್ರಿ. ಆಷಾಢದ ಕಪ್ಪು ಮೋಡ ಮುಸುಕಿದುದರಿಂದ, ತಾರೆಗಳ ಬೆಳಕಿಗೂ ತೆರೆಹಾಕಿದಂತಾಗಿತ್ತು. ದೂರದ ಮೂಡಣದಲ್ಲಿ ಮೂಡಿ ಮಾಯವಾಗುತ್ತಿದ್ದ ಮುಂಕುಮಿಂಚು, ಕತ್ತಲೆಯ ಇರುಳನ್ನು ಇನ್ನಷ್ಟು ಕಪ್ಪಾಗಿಸುತ್ತಿತ್ತು. ಬಂಡಿಯಾಳು ಸದಪರಿತು ಎತ್ತುಗಳನ್ನು ನಡೆಯಿಸುತ್ತಿದ್ದ. ದಾರಿಯ ಗುಡ್ಡದ ಓರೆಗುಂಟ ಬಂಡಿ ಸಾಗಿದ್ದಿತು. ಜೀರುಂಡೆಯ ಜಿರ್ರೆಂಬ ಕರ್ಕಶ ಶ್ರುತಿ, ದೂರದ ನಡುಗಾಡ್ಡದಲ್ಲಿ ನರಿಗಳು ಊಳಿಡುವ ಹುಕ್ಕ-ಹುಯ್ಯಲು, ದಾರಿಯ ಮರಗಳಲ್ಲಿದ್ದು ಕೂಗುವ ಗೂಗೆಗಳ 'ಘೂ ಘೂ' ಎಂಬ ಬೀಭತ್ಸ ಕೂಗು— ಎಲ್ಲವನ್ನೂ ಕೇಳಿಯೂ ಕೇಳದವರಂತೆ, ಮೌನಿಗಳಾದ ಎಲ್ಲರೂ ಹೆಜ್ಜೆ ಹಾಕುತ್ತಲಿದ್ದರು.

ಯಾವ ತೊಂದರೆಯೂ ಇಲ್ಲದೆ, ಬಂಡಿ ನಾಲ್ಕುವರೆ ಮೈಲು ದಾರಿಯನ್ನು ಕ್ರಮಿಸಿ, ಬೆಟ್ಟಕೇರಿಯನ್ನು ದಾಟಿ ನಡೆಯಿತು. ಮುಂದೆ ಬಿಲ್ಲು-ಕುಂದಿಯ ವರೆಗೆ ನಾಲ್ಕು ಮೈಲಿನ ದಾರಿಯಲ್ಲಿ, ಯಾವ ಹಳ್ಳಿಯೂ ಸಿಕ್ಕು-ವಂತಿಲ್ಲ. ದಾರಿ ಗುಡ್ಡವನ್ನು ಬಿಟ್ಟು ಬಯಲಲ್ಲಿ ಸಾಗುವುದು, ಸಾಲು-ಮರಗಳ ಕತ್ತಲೆಯ ಮರೆಯಲ್ಲಿ ಬಂಡಿ, ಮೊದಲಿಗಿಂತ ಸ್ವಲ್ಪ ವೇಗ ಹೆಚ್ಚಿಸಿ

ಕೊಂಡು ನಡೆಯಿತು. ಕುದುಂಜೆಟ್ಟಿನಿಂದ ದೂರ ಸಾಗಿಬಂದೆವೆಂಬ ಸಮಾ-ಧಾನದಿಂದ. ಇವರುಗಳಲ್ಲಿಯೆ ಎಲ್ಲರಿಗೂ ಸ್ವಲ್ಪ ಉಸಿರಾಡಿಸುವಂತಾಯಿತು. ಆದರೂ ಮಾತನಾಡಬೇಕೆಂಬ ಮನಸ್ಸು ಒಬ್ಬರಿಗೂ ಇಲ್ಲ. ದಾರಿಯುದ್ದಿಯ ಮುರಿವು, ಸರಿವು, ಕೊರಕಲು, ಹಳ್ಳಗಳನ್ನು ದಾಟುತ್ತ ಬಂಡಿ ಬಿಲ್ಲುಕುಂದಿಯನ್ನು ಹಿಂದೆ ಹಾಕಿದಾಗ, ರಾತ್ರಿಯು ಎರಡು ಜಾವ ಮೀರಿತ್ತು. ಊರನ್ನು ಸಮೀಪಿಸಿದ ಉತ್ಸಾಹದಿಂದಲೋ ಏನೋ; ಎತ್ತುಗಳು ತಮ್ಮ ಗತಿಯನ್ನು ಇನ್ನೂ ಹೆಚ್ಚಿಸಿದುವು.

ಬಿಲ್ಲುಕುಂದಿಯ ಉತ್ತರದ ಸಾಲ್ಕಿಂಟು ಮಾರುಗಳನ್ನು ದಾಟಿರಬಹುದು. ನೆಲಸಿದ್ದ ಮೌನವನ್ನು ಭೇದಿಸಿ, ಕುದುರೆಗಳ ಓಟದ ಕಾಲ ಸಪ್ಪಳ ಕೇಳ-ಲಾರಂಭಿಸಿತು. ಎರಡು ಮೂರು ನಿಮಿಷಗಳಲ್ಲಿಯೆ ಇದು ತೀರ ಹತ್ತಿರ-ಹತ್ತಿರಕ್ಕೇ ಬರುತ್ತಿರುವಂತೆ ಎನಿಸತೊಡಗಿತು. ನಾಯಕನೂ ಕಾಪಿನವರೂ ಜಾಗೃತರಾದರು. ಎಲ್ಲರೂ ಕತ್ತಲೆಯಲ್ಲಿಯೆ ಒಬ್ಬರನ್ನೊಬ್ಬರು ನೋಡಿದರು. ಬೇಸರದ ಧ್ವನಿಯಲ್ಲಿ ನಾಯಕನು ಹೇಳಿದ :

“ಪಾರಾದಿವೀ ಅಂತ ಅಂದುಕೊಂಡಿದ್ದಿವಿ; ಆದರ ಏನೋ ಕುತ್ತ ಬಂದು ಆಡರೂ ಹಾಂಗ ಕಾಣತೈತಿ. ಎಲ್ಲಾರೂ ಚಟುವಟಿಕೆಂದs ಇರ್ರಿ! ಹುಂ, ಎತ್ತುಗಳನ್ನು ಓಡಿಸಪಾ ಇನ್ನ ನೀನು! ಆದಷ್ಟು ಒತ್ತರಾ ಮಾಡು!”

ಎತ್ತುಗಳು ಓಡಲು ತೊಡಗಿದುವು. ಕಾಪಿನಾಳುಗಳು ಆದರ ಬೆನ್ನನ್ನೆ ಹಿಡಿದ್ದರು. ಕುದುರೆಯೂ ಗತಿಯನ್ನು ಹೆಚ್ಚಿಸಿತ್ತು. ಬಂಡಿ ಬಿಲ್ಲು-ಕುಂದಿಯ ಉತ್ತರಸೀಮೆಯನ್ನು ಸಮೀಪಿಸುತ್ತಿರುವಾಗಲೆ, ಹದಿನೈದು ಹದಿ-ನಾರು ಜನ ಕುದುರೆಯಾಳುಗಳು ಕುದುರೆಗಳನ್ನು ಓಡಿಸುತ್ತ ಬಂದು, ಬಂಡಿಯನ್ನು ಸಮೀಪಿಸಿದರು. ಕೆಲವರು ಬದಿಗೆ ಹಾಯ್ದು ಮುನ್ನುಗ್ಗಿ ಬಂಡಿಯನ್ನು ಅಡ್ಡಗಟ್ಟಿದರು. ಏನು ಮಾಡಬೇಕೆಂಬುದು ತಿಳಿಯದೆ ಬಂಡಿ-ಯಾಳು ಎತ್ತಿನ ಮೂಗುದಾರಗಳನ್ನು ಸೆಳೆದು ನಿಲ್ಲಿಸಿದ. ಎತ್ತು ನಿಂತು. ಬಿಟ್ಟುವು. ಇದ್ದುದಿದ್ದ ಹಾಗೆಯೆ ನಾಲ್ಕು ದೀವಟಿಗೆಗಳು ಹೊತ್ತಿ ಬೆಳಗಲು ತೊಡಗಿದುವು. ಕಾಪಿನವರಿಗೆ, ತಾವೀಗ ಮುಂದೆ ಹೋಗಬೇಕೋ ಹಿಂದೆಯ

ಇರಬೇಕೋ— ಎಂಬ ಗೊಂದಲವುಂಟಾಯಿತು. ಜಟ್ಟಿನಾಯಕ ತನ್ನ ಕುದುರೆಯನ್ನು ಗಾಡಿಯ ಎಡಪಕ್ಕದಿಂದ ಮುಂದೆ ಬಿಟ್ಟ. ಗಾಡಿಯನ್ನು ಅಡ್ಡಗಟ್ಟಿದ ರಾವತನ ಮೇಲೆ ಏರಿಹೋದ. ಎಲ್ಲರಿಗೂ ಪರಿಸ್ಥಿತಿಯ ಕಲ್ಪನೆಯುಂಟಾಗಿ ಎಲ್ಲರೂ ಜಾಗೃತರಾದರು. ಜಟ್ಟಿನಾಯಕ ಮುಂದಿನವರೊಂದಿಗೆ ಕಾದತೊಡಗಿದ; ಕಾಪಿನಾಳುಗಳೂ ಜೀವದ ಹಂಗುಬಿಟ್ಟು ಮಿಕ್ಕವರೊಂದಿಗೆ ಕಾದಲು ತೊಡಗಿದರು.

ಈ ಗಡಿಬಿಡಿಯಲ್ಲಿ ಗಾಡಿಯಾಳು ಎತ್ತಿನ ಮೂಗುದಾರಗಳನ್ನು ಸಡಿಲು ಬಿಟ್ಟಿದ್ದ. ಗಾಬರಿಯಾದ ಎತ್ತುಗಳು ಬೆಚ್ಚಿ, ಅಡ್ಡವಾಗಿ ನಿಂತ ಕುದುರೆಗಳನ್ನು ಲೆಕ್ಕಕ್ಕೆ ತಾರದೆ, ಒಮ್ಮೆಲೇ ನಿಟ್ಟೋಟಬಿಟ್ಟುವು. ಬಂಡಿಯ ಬೆನ್ನುಹತ್ತಬೇಕೆಂದ ಕುದುರೆಯಾಳುಗಳನ್ನು, ಜಟ್ಟಿನಾಯಕನ ಕೈಚಳಕ ತಡೆದು ಹಿಡಿಯಿತು

ಜೀವದ ಪರವೆಯಿಲ್ಲದೆ ಓಡತೊಡಗಿದ್ದ ಎತ್ತುಗಳು, ಏಳೆಂಟು ಹೊಲಗಳನ್ನು ದಾಟಿರಬಹುದು. ಇದ್ದದಿದ್ದ ಹಾಗೆಯೆ ಕೊರಳ ಜತ್ತಿಗೆ ಹರಿದು, ಬಲಗಡೆಯ ಎತ್ತು ಹಾಗೆಯೆ ಮುಂದುವರಿದು ಓಡಿಹೋಯಿತು. ಎಡಗಡೆಯ ಎತ್ತು ನೊಗವನ್ನು ಹೊತ್ತುಕೊಂಡು ನಿಂತಲ್ಲಿಯೇ ನಿಂತುಬಿಟ್ಟಿತು. ಒಳಗೆ ಕುಳಿತ ಚಿನ್ನಬ್ಬೆ ಕೂಗಿಕೊಂಡಳು: “ಅಯ್ಯೋ, ಘಾತ ! ಘಾತ ! ಯಾರಾದರೂ ಬರ್ರಿ ! ದೇವರೇ ! ಈಗೇನು ಗತಿ ?”

ಬಂಡಿಯಾಳು ಯಾವುದೂ ತಿಳಿಯದೆ, ಗಟ್ಟಿಯಾಗಿ ಬಾಯಿ ಬಾಯಿ ಹೊಡೆದುಕೊಳ್ಳಲಾರಂಭಿಸಿದ. ಸಮೀಪದ ಹೊಲದಲ್ಲಿ ನಾಯಿಗಳು ಬೊಗಳ ತೊಡಗಿದುವು. ದೂರದ ಗುಡಿಸಿಲೊಂದರಲ್ಲಿ ದೀಪದ ಬೆಳಕು ಕಂಡಿತು. ಬಂಡಿಯಾಳು ಎಡೆಬಿಡದೆ ಬೊಬ್ಬೆ ಕಟ್ಟಿದ. ಚಿನ್ನಬ್ಬೆಯೂ ಕುಳಿತಲ್ಲಿಂದಲೇ ಕೂಗುತ್ತಿದ್ದಳು.

ಬೆಳಕು ಕಾಣುತ್ತಿದ್ದ ಗುಡಿಸಿಲ ಕಡೆಯಿಂದ ಒಬ್ಬ ಮನುಷ್ಯ ದಡದಡನೆ ಓಡುತ್ತ ಬಂಡಿಯ ಕಡೆಗೆ ಬಂದ. ಕೈಯಲ್ಲಿ ಹಿಡಿದಿದ್ದ ಭಲ್ಲೆಯ. ಬಂದು ನಿಂತು ಗಡುಸಾದ ಧ್ವನಿಯಲ್ಲಿ ಆತ ಬಂಡಿಯವನನ್ನು ಕೇಳಿದ :

“ಯಾರು ನೀವು ? ಏನಾಗೆಯ್ತಿ ? ಕೂಗಿಕೊಳ್ತೀರಿ ಯಾಕ ?”

ಬಂಡಿಯಾಳು ಹೇಳಿದ:

"ಯಪ್ಪಾ ನಾವು ಹೊನ್ನಕುಪ್ಪಿಯವರು. ಜಟ್ಟಿನಾಯಕರ ಸೊಸಿನ್ನ ಕರಕೊಂಡು ಊರಿಗೆ ಹೊಂಟೇವಿ. ಕುಟುಂಬಿಟ್ಟದ ಖಾನನ ಕುದುರೀ ಸವಾರರು ಬಂದು, ಜಟ್ಟಿನಾಯಕರನ್ನ— ನಮ್ಮ ಕಾಪಿನ ಬಂಟರನ್ನ— ಮುತ್ತಿಗೀ ಹಾಕಿ, ಅಲ್ಲಿ ಹೊಡೀಲಾಕ ಹತ್ಯಾರ. ಅಲ್ಲಿ ನೋಡ್ರಿ, ದಿವಟಿಗೀ ಬೆಳಕು ಕಾಣತಾವ !"

ಆತ ಅಚ್ಚರಿಯಿಂದ ಕೇಳಿದ:

"ಖಾನನ ಮಂದಿ ಬಂದು ಯಾಕ ಮುತ್ತಿಗೀ ಹಾಕ್ಯಾರ ? ಕಾರಣೇನು ?"

"ಯಪ್ಪಾ. ಅದನೆಲ್ಲಾ ಏನ ಹೇಳೋದ ನಿಮಗ....! ನಮ್ಮ ಗೌಡರ ಸೊಸೀಮ್ಯಾಗ ಆ ನೀಚನ ಕಣ್ಣು ಇತ್ತಂತ. ಅವನ ಕಣ್ಣ ತಪ್ಪಿಸೂದಕ್ಕಂತ, ಈ ಸರಿರಾತ್ರ್ಯಾಗ ಆಕಿನ್ನ ಈ ಕೊಲ್ಲಾರಿಯೊಳಗ ಕೂಡಿಸಿಕೊಂಡು ಬಂದಿವಿ. ನಮ್ಮ ಹಂಚಿಕೆಲ್ಲಾ ಪಾಳಾಗಿ ಹೋತು ತಂದೆ ! ಈಗ ಹತ್ತು-ಹದಿನೈದು ಮಂದಿ ಧುತ್ತಂತ ಬಂದು ಮುತ್ತಿಗೀ ಹಾಕ್ಯಾರ್ರಿ ! ಇಲ್ಲಿ ಜತ್ತಿಗಿ ಹರಿದು ಒಂದು ಎತ್ತು ಬೆದರಿ ಓಡಿ ಹೋತರಿ. ಅಯ್ಯೋ, ನಮ್ಮ ಗೌಡರ ಸೊಸೀ ಇನ್ನ ನಮಗ ದಕ್ಕ್ಯಾ ಬಗೀ ಹ್ಯಾಂಗರೀ !"

ಬಂದ ವ್ಯಕ್ತಿ ಒಂದೇ ಒಂದು ನಿಮಿಷ ತಡೆದು ನಿಂತು ಕೇಳಿತು:

"ಈಗ ನಿಮ್ಮ ಗೌಡರ ಸೊಸೀ ಎಲ್ಲಿ ಆದಾಳು ?"

"ಇಲ್ಲೀ ಬಂಡಿಯೊಳಗ ಕುಂತುಕೊಂಡಾಳ್ರಿ !"

ಕೊಲ್ಲಾರದಲ್ಲಿ ಮುಖಹಿಕ್ಕಿ ಆತ ಮಾತನಾಡಿದ:

"ತಾಯೀ, ನೀಯೇನೂ ಹೆದರಬ್ಯಾಡ. ಈ ಹುಲಿಯಣ್ಣನ ಮೈಯಾಗ ಉಸುರು ಇರೂತನಕಾ, ಯಾದ್ಯಾವ ಬಂದು, ನಿನ್ನ ಮೈಗೆ ಕೈಹಚ್ಚತಾನ ನೋಡತೀನಿ...."

ಕೊಲ್ಲಾರದೊಳಗೆ ಕುಳಿತ ಚಿನ್ನಬ್ಬೆಯ ಹೃದಯ ಹೊಡೆದುಕೊಂಡಿತು. ಒಂದು ಬಗೆಯ ಧೈರ್ಯ ಆವಳ ಕಾತರತೆಯನ್ನು ಕಡಮೆ ಮಾಡಿತು. ಅವಳು ಕೃತಜ್ಞತೆಯ ನೋಟಗಳಿಂದ ಹುಲಿಯಣ್ಣನ ಧ್ವನಿ ಬಂದ ಕಡೆಗೆ ನೋಡಿದಳು. ಹುಲಿಯಣ್ಣ ಬಂಡಿಯಾಳಿಗೆ ಹೇಳಿದ:

" ನೀನು ಈ ಶೀಳುದಾರಿಯಿಂದ ಓಡಿಹೋಗು; ಒಂದು ಕೊಂಬಿನ ಕೂಗಳತೀ ಹ್ಯಾಂಗದರ, ಅಲ್ಲಿ ಗುಡಿಸಲದೊಳಗ ನಮ್ಮ ಜನಾ ಮಲಕ್ಕೊಂಡೈತಿ ನೀನು ಲಗೂಮಾಡಿ, ಹುಲಿಯಣ್ಣ ಕರೀತಾನಂತ ಹೇಳಿ, ಅವರನ್ನ ಎಬ್ಬಿಸಿ ಕೊಂಡು ಬಾ ! ಹುಂ.... ಓಡು ! "

ಬಂಡಿಯಾಳು ಇನ್ನೊಂದು ಮಾತನಾಡದೆ ಓಟ ಬಿಟ್ಟ. ನಾಲ್ಕೈದು ಜನ ಸವಾರರು ಕುದುರೆಗಳನ್ನೋಡಿಸುತ್ತ ಬರುವುದು ಹುಲಿಯಣ್ಣನಿಗೆ ಕಂಡಿತು. ನಿಮಿಷದಲ್ಲಿಯೆ ಅವರು ಬಂಡಿ ನಿಂತಲ್ಲಿಗೆ ಬಂದುಬಿಟ್ಟರು. ಹುಲಿಯಣ್ಣ ಕೈಯ ಭಲ್ಲೆಯುವನ್ನು ಎಚ್ಚರ ಗೊಳಿಸಿದ; ಐವರೂ ಬಂದು ಬಂಡಿಯ ಬಳಿ ನಿಂತಾಗ ಸಿಡಿಲಿನ ಧ್ವನಿಯಲ್ಲಿ ಕೂಗಿದ :

" ಏ, ಸೈತಾನನ ಮಕ್ಕಳ್ರ್ಯಾ ! ಗಂಡುಳ್ಳ ಹೆಣ್ಣುಮಗಳ ವ್ಯಾಗ, ಈ ನಡುರಾತ್ರಿಯೊಳಗ ಕೈಮಾಡಾಕ ಬಂದೀರಾ ? ಸುಮ್ಮಗS ಬಂದ ದಾರೀ ಹಿಡೀರಿ ! ಇಲ್ಲಿ ಇನ್ನ್ಯಾರೂ ಇಲ್ಲ. ಹುಲ್ಲಿಗಿಗೌಡನ ಮಗಾ ಹುಲಿಯಣ್ಣ ಬಂದು ನಿಂತಾನ. ಯಾರು ಮುಂದಕ್ಕ ಬರತೀರಿ ಬರ್ರಿ ಇಲ್ಲೆ ! "

ಈ ಗಡುಸಿನ ನುಡಿಗಳನ್ನು ಕೇಳಿ, ಸವಾರರು ಒಂದು ನಿಮಿಷ ಬೆಚ್ಚಿ, ನಿಂತರು. ಕೂಡಲೆ ಚಳವಳಿ ನಡೆಸಿದರು. ಒಬ್ಬ ಸವಾರ ತಮ್ಮ ಭಾಷೆ ಯಲ್ಲಿ ಹೇಳಿದ :

" ಹುಂ, ನೋಡತೀರೇನು ? ಈ ಹಂದಿಯನ್ನು ಹೊಡೆದು ನೂಕಿರಿ ! "

ಹೀಗವನು ಹೇಳುತ್ತಿರುವಾಗಲೆ, ಹುಲಿಯಣ್ಣನ ಕೈಯ ಭಲ್ಲೆಯದ ಏಟು, ಅವನ ಬಲಗಣ್ಣನ್ನು ಗುರಿಯಿಟ್ಟು ಬಿದ್ದಿತು. ಕಣ್ಣಿಗೆ ಬಿದ್ದ ಏಟಿ-ನಿಂದ ವೈಮುರಿದು, ಆತ ಕಿರುಚಿಕೊಂಡು, ಕುದುರೆಯಿಂದ ಕೆಳಕ್ಕೆ ಉರುಳಿದ. ಮಿಕ್ಕ ನಾಲ್ವರೂ ಒಮ್ಮೆಲೆ ಹುಲಿಯಣ್ಣನ ಮೇಲೆ ಏರಿಬಂದರು. ಆ ಭಲ್ಲೆ-ಯದ ಬಂಟು ಚಳಕದಿಂದ ಅದನ್ನು ತಿರುಗಿಸುತ್ತ, ತನ್ನನ್ನು ಸಂರಕ್ಷಣೆ ಮಾಡಿಕೊಳ್ಳಲು ಪ್ರಾರಂಭಿಸಿದ. ನಾಲ್ಕೈದು ನಿಮಿಷಗಳ ವರೆಗೆ ಹೀಗೆಯೆ ಕಾದಾಟ ನಡೆಸಿರುವಾಗ, ಆ ಸವಾರರಲ್ಲಿಯ ಒಬ್ಬ ಬಂಡಿಯತ್ತ ನಡೆಸಿರು-ವುದನ್ನು ಕಂಡು, ಹುಲಿಯಣ್ಣ ತನ್ನ ಭಲ್ಲೆಯುವನ್ನು ಇವನಿಗೆ ಗುರಿಯಿಟ್ಟು

ಬೀಸಿದ. ಗುರಿಯು ತಪ್ಪಲಿಲ್ಲ; ಬೀಸಿದ ಭಲ್ಲೆಯವು ಆ ಸವಾರನ ಹೊಟ್ಟೆಯಲ್ಲಿ ನೆಟ್ಟು, 'ಯಾ ಅಲ್ಲಾ' ಎಂದು ಕಿರಿಚುತ್ತ ಅವನೂ ನೆಲಕ್ಕೆ ಬಿದ್ದ. ನೆಟ್ಟ ಭಲ್ಲೆಯನ್ನು ಮರಳಿ ಕಿತ್ತುಕೊಳ್ಳಬೇಕೆಂದು ಹೋಗುತ್ತಿರುವಾಗಲೆ, ಮೂವರೂ ರಾವುತರು ಹುಲಿಯಣ್ಣನ ಮೇಲೆ ಎರಗಿ, ತಮ್ಮ ಕೈಯ ಕತ್ತಿಗಳಿಂದ ಏಟುಹಾಕಿದರು. ವೈಯು ಲಾಗನಿಂದ ಆತ ಇಬ್ಬರ ಏಟುಗಳನ್ನು ತಪ್ಪಿಸಿಕೊಂಡನಾದರೂ, ಮೂರನೆಯವನ ಬಲವಾದ ಏಟನ್ನು ತಪ್ಪಿಸಿಕೊಳ್ಳಲಿಕ್ಕೆ ಸಾಧ್ಯವಾಗಲಿಲ್ಲ. ಬಲಗಡೆಯ ಕುತ್ತಿಗೆಗೆ ತೀವ್ರವಾದ ಆಘಾತ ಬಿದ್ದು, ಗಾಯವು ಕೆನ್ನೀರಿನಿಂದ ಹುಲಿಯಣ್ಣನನ್ನು ತೋಯಿಸತೊಡಗಿತು. ಹಾಗೆಯೆ ಆತ ಆವೇಶದಲ್ಲಿ ಓಡಿಹೋಗಿ ಭಲ್ಲೆಯನ್ನು ಕಿತ್ತುತಂದು, ತಿರುಗಿಸಲು ಪ್ರಾರಂಭಿಸಿದ.

ಇಷ್ಟೆಲ್ಲ ನಡೆಯುವುದರಲ್ಲಿ ಒಂದುವರೆ ಎರಡು ಗಳಿಗೆಗಳಾಗಿ ಹೋದವು. ದೂರದಲ್ಲಿ ಹುಯಿಲು ಕೇಳಿಸಿತು. ರಾವುತರು ಆ ಕಡೆಗೆ ನೋಡಿದರು. ತಮ್ಮ ಕಡೆಗೆ ಸಾಗಿಬರುತ್ತಿರುವ ಇಪ್ಪತ್ತು–ಮೂವತ್ತು ಪಂಜುಗಳು ಕಂಡುವು. ಗುಂಪಾಗಿ ಬರುವ ಜನರ ಕೇಕೆ–ಕೂಗಾಟಗಳನ್ನೂ ಕೇಳಿದರು. ಅವರು ಅಲ್ಲಿಗೆ ಬಂದರೆ ಖಂಡಿತವಾಗಿ ತಮಗೆ ಉಳಿಗಾಲವಿಲ್ಲವೆಂದು, ಸವಾರರು ಬೆದರಿ ಗುಂಡಿಗೆಯೊಡೆದುಕೊಂಡರು. ಕೂಡಲೆ ಕುದುರೆಗಳನ್ನು ತಿರುಗಿಸಿ ಓಡಿಸಲು ತೊಡಗಿದರು. ಹುಲಿಯಣ್ಣ ಅವರು ಓಡಿಹೋಗುವುದನ್ನು ಒಂದೆರಡು ನಿಮಿಷ ನಿಂತು ನೋಡಿದ. ನೋಡುತ್ತಿರುವಾಗಲೆ ಕಣ್ಣಿಗೆ ಕಾವಳ ಮುಸುಕಿದಂತಾಗಿ, ನಿಂತಲ್ಲಿಯೆ ಧೊಪ್ಪೆಂದು ಬಿದ್ದುಬಿಟ್ಟ. ಬಂಡಿಯಲ್ಲಿದ್ದ ಚಿನ್ನಬ್ಬೆಗೆ ಸಿಡಿಲು ಬಡಿದಂತಾಯಿತು.

ಮರಳಿ ಓಡಿದ ರಾವುತರು, ಜಟ್ಟಿನಾಯಕನ ಜನರೊಂದಿಗೆ ಕಾದಾಡುತ್ತ ನಿಂತ ತಮ್ಮ ಜನಕ್ಕೆ ಕೂಗಿ ಹೇಳಿದರು:

"ವೈರಿಗಳು ಬಹಳ ಜನ ಗುಂಪುಗೂಡಿ ಬರುತ್ತಿದ್ದಾರೆ....ನಡೆಯಿರಿ.... ತಿರುಗಿಸಿರಿ ಕುದುರೆಗಳನ್ನು....ಓಡಿರಿ, ಹೊರಡಿರಿ!"

ಬದುಕಿ ಉಳಿದಿದ್ದ ಎಲ್ಲ ಸವಾರರೂ ಬೆದರಿ ಕುದುರೆಗಳನ್ನು ತಿರು–ಗಿಸಿ ಓಡಿಸಿದರು. ಬಂದಿದ್ದ ಹದಿನೈದು ಕುದುರೆಯಾಳುಗಳಲ್ಲಿ ಜೀವಸಹಿತ

ಮರಳಿದವರು ಎಂಟು ಜನರು ಮಾತ್ರ.

ಬಂಡಿಯಾಳಿನೊಂದಿಗೆ ಬಂದ ಜನರು, ಮೊದಲು ಬಂಡಿ ನಿಂತಲ್ಲಿಗೆ ಬಂದರು. ವೈರಿಗಳಾರೂ ಅಲ್ಲಿ ಇರಲಿಲ್ಲ. ಹುಲಿಯಣ್ಣ ನೆತ್ತರದಿಂದ ನೆನೆದು ಎಚ್ಚರತಪ್ಪಿ ಬಿದ್ದಿದ್ದ. ಜನರು ಬಂದೊಡನೆಯೆ ಚಿನ್ನಬ್ಬೆಗೆ ಧೈರ್ಯ ಬಂದಂತಾಗಿ, ಆಕೆ ಕೊಲ್ಲಾರದಿಂದ ಕೆಳಗಿಳಿದಳು. ಪಂಜುಗಳ ಬೆಳಕಿನಲ್ಲಿ, ಗಾಯಗೊಂಡು ಬಿದ್ದಿದ್ದ ಹುಲಿಯಣ್ಣನ ಭೀಕರಾಕೃತಿಯನ್ನು ನೋಡಿದಳು; ಎದೆಗೆ ಬಡಿದುಕೊಂಡು 'ಅಯ್ಯೋ !' ಎಂದಳು. ದುಃಖದ ಆವೇಗದಿಂದ, ಹುಲಿಯಣ್ಣನ ಪಾದಗಳ ಮೇಲೆ ಬಿದ್ದುಕೊಂಡು ಅಳಲು-ತೊಡಗಿದಳು.

ಗುಂಪಿನಲ್ಲಿಯ ಕೆಲವರು ಕೂಡಿ, ಹುಲಿಯಣ್ಣನನ್ನು ಎತ್ತಿಕೊಂಡು, ಆತನ ಗುಡಿಸಿಲ ಕಡೆಗೆ ನಡೆದರು. ಚಿನ್ನಬ್ಬೆಯೂ ಅವರ ಹಿಂದೆ ಹಿಂದೆ ಹೊರಟಳು. ಮಿಕ್ಕವರು, ಜಟ್ಟಿನಾಯಕನ ಜನರು ಕಾದಾಡುತ್ತಿದ್ದಲ್ಲಿಗೆ ಓಡಿದರು. ಹೋಗಿ ನೋಡಿದರೆ ಅಲ್ಲಿಯೂ ವೈರಿಗಳಾರೂ ಇರಲಿಲ್ಲ. ಜಟ್ಟಿನಾಯಕನ ಕಾಪಿನಾಳುಗಳಲ್ಲಿ ಇಬ್ಬರು ಸತ್ತುಬಿದ್ದಿದ್ದರು. ಒಬ್ಬನು ಗಾಯಗೊಂಡು ನೆಲದಲ್ಲಿ ಬಿದ್ದುಕೊಂಡು, ಕೊನೆಯ ಉಸಿರುಗಳನ್ನು ಬಿಡು-ತ್ತಲಿದ್ದ. ಅಲ್ಲಿಯೇ ಬಿದ್ದಿದ್ದ ಜಟ್ಟಿನಾಯಕನ ಬಲದ ತೋಳು ಕತ್ತರಿಸಿ ಹೋಗಿದ್ದಿತು. ಜೀವವಿನ್ನೂ ಇದ್ದಿತಾದರೂ ಮೈಮೇಲೆ ಎಚ್ಚರವಿರಲಿಲ್ಲ. ಬಂದಿದ್ದವರಲ್ಲಿ ಕೆಲವರು ಅವನನ್ನು ಹೊತ್ತುಕೊಂಡು ಹುಲಿಯಣ್ಣನ ಗುಡಿಸಿಲ ಕಡೆಗೆ ನಡೆದರು. ಕಾಪಿ ಬದುಕಿದ್ದ ಕಾಪಿನ ಬಂಟ, ನಡೆದ ಸಂಗತಿಯನ್ನೆಲ್ಲ ವಿವರಿಸುತ್ತ ಅವರೊಂದಿಗೆ ಹೊರಟು ನಡೆದ.

೪

ಪರಿವಾರದವರ ಸಹಕಾರದೊಂದಿಗೆ ಚಿನ್ನಬ್ಬೆ ಮಾಡುತ್ತಲಿದ್ದ ಯಾವ ಉಪಚಾರವೂ ಹುಲಿಯಣ್ಣನನ್ನು ಚೇತರಿಸಲಿಕ್ಕೆ ಸಮರ್ಥವಾಗಲಿಲ್ಲ. ಮರ್ಮಸ್ಥಾನಕ್ಕೆ ಬಿದ್ದ ಪೆಟ್ಟಿನಿಂದ ಮಿತಿಮೀರಿ ರಕ್ತಸ್ರಾವವಾದುದರಿಂದ,

ನರಗಳಲ್ಲಿಯು ಚೈತನ್ಯವೇ ಕುಂದಿಹೋಗಿತ್ತು. ನಿಮಿಷ-ನಿಮಿಷಕ್ಕೂ ಅವನ ಜೀವದ ಸತ್ವ ಕಡಿಮೆಯಾಗುತ್ತ ನಡೆದಿತ್ತು.

ಬೆಳಗಾಗುತ್ತ ನಡೆದಂತೆ ಜಟ್ಟಿನಾಯಕನ ಮೈಮರಿಕೆ ಹರಿಯುತ್ತ ಬಂದು, ಮೈಮೇಲೆ ಸಂಪೂರ್ಣ ಎಚ್ಚರು ಬಂದಿತು. ನೆರೆದ ಜನರಿಂದ ತಾನೆಲ್ಲಿ ಇದ್ದೇನೆಂಬುದು ಗೊತ್ತಾಯಿತು. ತನ್ನನ್ನು ವೈರಿಗಳಿಂದ ಉಳಿಸಿದ ವೀರನಾರೆಂದು ತಿಳಿಯಿತು. ಸೊಸೆಯು ದುಃಖದಿಂದ ಹುಲಿಯಣ್ಣನ ವೀರ-ವಾರ್ತೆಯನ್ನು ಕೇಳಿದನು. ಆಗ ಮೈಯಲ್ಲಿ ಚೈತನ್ಯ ಸಂಚಾರವಾದಂತಾಗಿ, ನಾಯಕ ದಿಗ್ಗನೆ ಮೇಲಕ್ಕೆದ್ದ. ಹುಲಿಯಣ್ಣ ಮಲಗಿದಲ್ಲಿಗೆ ನಡೆದ. ಅವನ ಕಾಲಬಳಿಯಲ್ಲಿ ಕುಳಿತು, ಎಡದ ಕೈಯಿಂದಲೇ ಅವನ ಅಡಿಯ ಧೂಳಿಯನ್ನು ಹಣೆಗೆ ಹಚ್ಚಿಕೊಂಡ. ಆಗೆಯೆ ಎದ್ದು ತಲೆಯ ಬಳಿ ಬಂದು ಕುಳಿತು, ಅವನ ತಲೆಯನ್ನೆತ್ತಿ ತೊಡೆಯ ಮೇಲೆ ಇರಿಸಿಕೊಂಡು, ಪರವಶನಾಗಿಯೆ ಮಾತನಾಡತೊಡಗಿದ:

"ಹುಲಿಯಣ್ಣ, ನನ್ನ ಕುಲದ ಮರ್ಯಾದೀ ಉಳಿಸಿದ ಬಂಟ ನೀನು! ನನ್ನ ಮಾದೇವಿಯಂತಾ ಸೊಸಿನ್ನ ಉಳಿಸಿಕೊಟ್ಟ ದೇವರು ನೀನು! ನಿನ್ನ ಉಪಕಾರದ ಋಣ, ಏನ ಮಾಡಿದರ ನನ್ನಿಂದ ತೀರಿಸಲಿಕ್ಕೆ ಆದೀತು! ನಿನ್ನಂತಾ ಸೂರ-ವೀರನ್ನ ಹೆತ್ತ ಮಲ್ಲಿಗಿಗೊಂಡನ ಪುಣ್ಣೆ ದೊಡ್ಡದು. ಅವನ ಯೋಗ್ಯತಿ ನನಗ ಎಂದೂ ಬರಲಾರದು. ನಮೋ ನಮೋ ಹುಲಿಯಣ್ಣಾ...."

ಹುಲಿಯಣ್ಣ ನೀಗ ಬಿಕ್ಕಲುತೊಡಗಿದ್ದ. ಜಟ್ಟಿನಾಯಕ ಅವನ ಬಾಯಲ್ಲಿ ನೀರು ಹಾಕುತ್ತ, ದುಃಖಾವೇಗದಿಂದ ಮತ್ತೆ ಮಾತಿಗೆ ಆರಂಭಿಸಿದ:

"ಹುಲಿಯಣ್ಣಾ, ಯಾವ ಹೊಲದ ಸೀಮೀ ಸಲುವಾಗಿ ನಮ್ಮ-ನಿಮ್ಮ ನಡುವ ವೈಮನಸು ಬಂದಿತ್ತೋ, ಆ ಹುಲುಸಿನ ಹೊಲಾ ನಿನಗಿಂತಾ ದೊಡ್ಡದೇನೂ ಅಲ್ಲ! ನನ್ನ ಬಡನನದೊಂದು ಭಕ್ತಿಯ ಗುರುತು ಇರಲೀ ಅಂತ, ಆ ಹೊಲಾನ 'ವೀರಮಾನ್ಯ' ಹಾಕಿಕೊಟ್ಟುಬಿಟ್ಟೇದೀನಿ ನಿಮ್ಮ ಮನಿತನಕ್ಕ. ಇಲ್ಲಿ ಕೂತಿದೂ ಜನರೆಲ್ಲಾ ಇದಕ್ಕ ಸಾಕ್ಷಿಯಾಗಿರಲಿ! ಇಂದಿನಿಂದ ನನ್ನ ಆ ಹೊಲ, ಬಿಲ್ಲಾಕುಂದೀ ಗೌಡನ ಒಡಿತನಕ್ಕ ಸೇರಿದ್ದು!"

ಎಂದು ನುಡಿದು ನಾಯಕ ಸೊಸೆಯನ್ನು ಕರೆದು. 'ನಿನ್ನ ಮಾನಾ ಉಳಿಸಿದ ಅಣ್ಣನ ಬಾಯೊಳಗ ನೀರು ಹಾಕವ್ವಾ' ಎಂದು ಹೇಳಿದ.

ಚಿನ್ನಬ್ಬೆಯು ಕಂಬನಿಗರೆಯುತ್ತಲೇ ಬಂದು ಕುಳಿತು, ಹುಲಿಯಣ್ಣನ ಬಾಯೊಳಗೆ ನೀರು ಹಾಕಿದಳು. ಒಂದು ಜನಿ ಗುಟುಕರಿಸಿದಂತಾಗಿ, ಮಿಕ್ಕ ನೀರೆಲ್ಲ ಹೊರಗೆ ಬಂದಿತು. ಅದರೊಂದಿಗೆ ಆತನ ಜೀವದ ಬೆಳಕೂ ಹೊರಕ್ಕೆ ಬಂದು, ಮುಂಜಾವದ ಬೆಳಕಿನಲ್ಲಿ ಬೆರೆತುಕೊಂಡಿತು.

ಮುಂದಿನ ಕತೆಯನ್ನು ಏನು ಹೇಳುವುದು? ಹುಲಿಯಣ್ಣನಿಗಾಗಿ ಮಲ್ಲಿಗೆಗೊಂಡರ ಮನೆಯಲ್ಲಿ ಅಳುವಿನ ಕಡಲೇ ಉಕ್ಕೇರಿತೆನ್ನಿ. ಬಿಲ್ಲುಕುಂದಿಯ ಊರಿಗೆ ಊರೇ ಕಣ್ಣೀರ ಹೊಳೆ ಹರಿಯಿಸಿತೆನ್ನಿ.

ಹುಲಿಯಣ್ಣನನ್ನು ಬಲಿಯನ್ನಾಗಿ ತೆಗೆದುಕೊಂಡು, ಜಟ್ಟಿನಾಯಕ-ಮಲ್ಲಿಗೆಗೊಂಡರನ್ನು ಹಿಡಿದುಕೊಂಡಿದ್ದ ದೆವ್ವ ಓಡಿಹೋಯಿತು. ಇಬ್ಬರೂ ಸಾಯುವವರೆಗೆ ಸ್ನೇಹಿತರಾಗಿ ಬಾಳಿದರು.

* * * *

ಹೊನ್ನಕುಪ್ಪೆಯ 'ಹುಲುಸಿನ ಹೊಲ' ಮಲ್ಲಿಗೆಗೊಂಡನ ಮನೆತನ-ದವರಿಗೆ 'ವೀರಮಾಸ್ತ್ಯದ ಹೊಲ' ಎಂದು ಇದುವರೆಗೂ ನಡೆದುಕೊಂಡು ಬಂದಿದೆ. ಜಟ್ಟಿನಾಯಕನು ನೆಡಿಸಿದ ಹುಲಿಯಣ್ಣನ 'ವೀರಗಲ್ಲು' ಈಗಲೂ ಆ ಹೊಲದಲ್ಲಿ ನಿಂತುಕೊಂಡು, ವೀರ ಹುಲಿಯಣ್ಣನ ಶೌರ್ಯದ ಕತೆ ಸಾರುತ್ತಿದೆ.

# ಇಬ್ಬಣದ ನಿಬ್ಬಣ

ಗುಡ್ಡದೂರಲ್ಲಿ ಗೌಡರ ಮನೆತನಗಳು ಎರಡು. ಒಂದು ಮಲ್ಲನಗೌಡರದು; ಇನ್ನೊಂದು ಗಿರಿಯಪ್ಪಗೌಡರದು. ಇಬ್ಬರೂ ವತನದಾರ ಗೌಡರು. ಊರ ಗೌಡಿಕೆಯ ಕೆಲಸ ಹತ್ತು ವರ್ಷ ಮಲ್ಲಪ್ಪಗೌಡರ ಮನೆತನಕ್ಕಿದ್ದರೆ, ಇನ್ನು ಹತ್ತು ವರ್ಷ ಗಿರಿಯಪ್ಪಗೌಡರ ಮನೆತನಕ್ಕೆ ಇರುವುದು. ಕುಲದಿಂದ ದಾಯಾದಿಗಳಲ್ಲವಾದರೂ, ವತನದಾರಿಕೆಯ ಮೂಲಕ ದಾಯಾದಿತನವು ಇವರಲ್ಲಿ ತಲೆತಲೆಯಿಂದಲೂ ನಡೆದುಕೊಂಡು ಬಂದಿದೆ.

ಊರಲ್ಲಿ ಮಲ್ಲಪ್ಪಗೌಡರ ಮನೆ ಮೇಲಿನ ಓಣಿಯಲ್ಲಿದ್ದರೆ, ಗಿರಿಯಪ್ಪಗೌಡರ ಮನೆ ಕೆಳಗಿನ ಓಣಿಯಲ್ಲಿ ಇದೆ. ಮನೆಗಳು ದೂರದೂರವಾಗಿ ಇದ್ದರೂ ಹೊಲಗಳು ಮಾತ್ರ ನೆರೆಹೊರೆಯಲ್ಲಿಯೇ ಇವೆ. ಊರ ಜನರು ಮಲ್ಲಪ್ಪಗೌಡರನ್ನು 'ಮ್ಯಾಗಿನ ಓಣಿಯ ಗೌಡರು' ಎಂದೂ, ಗಿರಿಯಪ್ಪಗೌಡರನ್ನು 'ತೆಳಗಿನ ಓಣಿಯ ಗೌಡರು' ಎಂದೂ ಕರೆಯುತ್ತಿದ್ದರು.

ಎರಡು ಮನೆತನಗಳಲ್ಲಿಯೂ ಎರಡೂ ಮನೆತನಗಳ ರಕ್ತಸಂಬಂಧ, ಪರಂಪರೆಯಾಗಿ ಹರಿದುಕೊಂಡು ಬಂದಿದೆ. ಏಕೆಂದರೆ ಮೊದಲಿನಿಂದಲೂ ಈ ಮನೆತನಗಳಲ್ಲಿ ಹೆಣ್ಣು-ಗಂಡುಗಳನ್ನು ಕೊಡುವಕೊಳ್ಳುವ ರೂಢಿ ಇದೆ. ಈಗ ಕೂಡ ಮಲ್ಲಪ್ಪಗೌಡರ ಮಗಳು ಚೆಲುವಕ್ಕನನ್ನು, ಗಿರಿಯಪ್ಪಗೌಡರ ಹಿರಿಯ ಮಗ ಸೋಮನಾಥನಿಗೆ ಕೊಟ್ಟಿದೆ.

ಸ್ನೇಹ-ದ್ವೇಷಗಳು— ಇವೆರಡೂ ಮನೆತನಗಳಲ್ಲಿ ಋತುಮಾನಗಳು ಇದ್ದ ಹಾಗೆ. ಯಾವುದೋ ದಿಕ್ಕಿನ ಗಾಳಿ ಬೀಸಲು ತೊಡಗಿದಾಗ, ಸ್ನೇಹದ ಬೀಜ ಮೊಳೆತು ಬೆಳೆಯತೊಡಗುವುದು. ಇನ್ನೊಂದಾವುದೋ ದಿಕ್ಕಿನ ಗಾಳಿ ಬೀಸಲಾರಂಭಿಸಿದಾಗ, ದ್ವೇಷದ ಬೇರು ಗಂಟೊಡೆದು ಚಿಗಿತು ಕುಡಿವರೆಯುತ್ತೊಡಗುವುದು. ಸ್ನೇಹದ ಗಾಳಿ ಬೀಸಿದಾಗ, ಬಲುದಿನದ ನಂಟುತನ

ನೆನಪಾಗಿ, ಹೊಸ ನಂಟುತನಕ್ಕೆ ಮೊದಲಾಗುವುದು. ದ್ವೇಷದ ಗಾಳಿ ಬೀಸಿದಾಗ, ಒಬ್ಬರಿಗೊಬ್ಬರು ಮಾಡಿದ್ದ ಕೇಡುಗಳ ನೆನಪಾಗಿ, ಮುಯ್ಯಿ ತೀರಿಸಬೇಕೆಂಬ ಮನಸ್ಸು ಆಟವಾಡಲು ತೊಡಗುವುದು. ಹೀಗೆಯೇ— ಇತ್ತೀಚೆಗೆ-ಸ್ನೇಹದ ಗಾಳಿ ಬೀಸಿದಾಗ, ಚೆಲುವಕ್ಕ-ಸೋಮನಾಥರ ಮದುವೆಯಾಗಿ ಹೊಸ ನಂಟುತನ ಪ್ರಾರಂಭವಾಗಿತ್ತು.

ಈ ಸ್ನೇಹ-ದ್ವೇಷಗಳ ಗಾಳಿ ಬೀಸಲಿಕ್ಕೆ ಒಮ್ಮೊಮ್ಮೆ ಸ್ಪಷ್ಟವಾದ ಕಾರಣಗಳೂ ಕಾಣುತ್ತಿದ್ದವು. ನೆರೆಯ-ಹೊರೆಯ ಹೊಲಗಳನ್ನು ಮಾಡಿದ ರೈತರಲ್ಲಿ ಬಂದ ವೈಮನಸ್ಸು, ಗೌಡರಿಬ್ಬರ ಹೃದಯಗಳಲ್ಲಿ ಕೈಚಳಕ ನಡೆಯಿಸುತ್ತಿತ್ತು. ಊರಲ್ಲಿಯ ಮಾನ-ಮರ್ಯಾದೆಯ 'ಬಾಬು'ಗಳ ವಿಚಾರದ ವಿಷ-ನೋಣಗಳೂ ಗೌಡರಿಬ್ಬರ ಮನಸ್ಸನ್ನು ಕಚ್ಚಿ ಕೆರಳಿಸುತ್ತಿದ್ದವು. ಊರ ಜನರಲ್ಲಿಯ ಒಳಜಗಳಗಳೂ, ಪಕ್ಷ-ಪಂಗಡಗಳೂ ಗೌಡರಿಬ್ಬರ ಭಾವನಾ-ವಿಕ್ಷೇಪಕ್ಕೆ ಕಾರಣವಾಗುತ್ತಿದ್ದವು. ಸಾರ್ವಜನಿಕರ ಸಂತೋಷಕ್ಕಾಗಿ ನಡೆವ ಆಟ-ನೋಟಗಳು, ಕುಸ್ತಿ-ಮೋಜುಗಳು, ಜಾತ್ರೆ-ನಿಬ್ಬಣಗಳು ಇವು ಕೂಡ ಮಾನಾಪಮಾನದ ಸಮಸ್ಯೆಯನ್ನು ಒಡ್ಡಿ, ಎರಡೂ ಮನೆತನಗಳಲ್ಲಿ ದ್ವೇಷದ ಕಿಡಿಗಳನ್ನು ತೂರುತ್ತಿದ್ದವು.

ಚೆಲುವಕ್ಕ-ಸೋಮನಾಥರ ಮದುವೆಯಾಯಿತಲ್ಲ! ಆಗ ಹುಡುಗಿಯ ಸೋದರಮಾವ, ಬೀಯಗರಿಂದ ತನಗೆ ಸಲ್ಲಬೇಕಾದ ಮನ್ನಣೆ ಸಲ್ಲಲಿಲ್ಲವೆಂದು ಮುನಿಸುಗೊಂಡ. ಹುಡುಗಿಯ ಅಣ್ಣ ರುದ್ರಗೌಡ, ಊಟಕ್ಕೆ ಕುಳಿತಾಗ ಬೇಕೆಂದೇ ತನಗೆ ಮುರುಕು ಮಣೆಯನ್ನೂ, ಹೊಲಸು ತಳಿಗೆಯನ್ನೂ ಹಾಕಿ ಅಪಮಾನ ಮಾಡಿದರೆಂದು ರೇಗಿಕೊಂಡ. ಹುಡುಗಿಯ ತಾಯಿ, ತನಗೆ ಕೊಟ್ಟ ಜವುಳಿ ಕಡಮೆ ಬೆಲೆಯದೆಂದು ನೊಂದು ಮುಖ ಮುದುರಿಸಿದಳು. ಈ ಮುಳಿಸು – ರೇಗು – ನೋವುಗಳಲ್ಲಿಯೇ ಮದುವೆಯ ಮುಕ್ತಾಯವಾಯಿತು. ಮದುವೆಗೆ ಮೊದಲು ಬೀಸುತ್ತಿದ್ದ ಸ್ನೇಹದ ಗಾಳಿ ದಿಕ್ಕು ಬದಲಿಸಿ, ಬೇರೆಯ ರೀತಿಯಿಂದ ಬೀಸಲು ತೊಡಗಿತು.

* * * *

ಕಾರಹುಣ್ಣಿವೆಯ ದಿನ ಹಳ್ಳಿಗಳಲ್ಲಿ 'ಕರಿ ಹರಿಯುವ' ಸಂಪ್ರದಾಯವಿರುವುದು. ಅದಕ್ಕಾಗಿ ಗುಡ್ಡದೂರಲ್ಲಿ ಮೇಲಿನ ಓಣಿಯ ಗೌಡರ ಮನೆ

ಯಿಂದ ಒಂದು ಎತ್ತು ಬರಬೇಕು; ಕೆಳಗಿನ ಓಣಿಯು ಗೌಡರ ಮನೆಯಿಂದ ಇನ್ನೊಂದು ಎತ್ತು ಬರಬೇಕು. ಆ ಆ ಓಣಿಯ ಜನರು ತಮ್ಮ ತಮ್ಮ ಗೌಡರ ಎತ್ತನ್ನು ವೈಭವದಿಂದ ಮೆರೆಯಿಸುತ್ತ ನಡುಚಾವಡಿಯ ಬಳಿ ತರುವರು; ಅಲ್ಲಿ ಕರಿ ಹರಿಯುವರು.

ಎಂದಿನಂತೆ ಈ ಸಲವೂ ಕರಿಹರಿಯುವ ಸಂಪ್ರದಾಯ ಉತ್ಸಾಹದಿಂದ ಸಾಗಿತು. ಕೆಳಗಿನ ಓಣಿಯು ಗೌಡರ ಕರಿಯು ಎತ್ತು ಮುಂದೆ ಓಡಿದಾಗ, ಆ ಎತ್ತಿನ ಅಭಿಮಾನಿಗಳೆಲ್ಲ 'ಭಲೆ' 'ಶಾಬಾಸ್' 'ಹುಯ್ ಹಾ!' ಎಂದು ಕೇಕೆ ಹಾಕಿದರು. ಗಿರಿಯಪ್ಪಗೌಡರ ಮನೆಯಾಳು ಶಿವಣ್ಣ, ಮಲ್ಲಪ್ಪಗೌಡರ ಹಿರಿಯ ಮಗ ರುದ್ರಗೌಡನ ಕಡೆಗೆ, ಹಂಗಿಸುವ ನೋಟದಿಂದ ಹೆಮ್ಮೆಯ ನಗೆನಗುತ್ತ ನೋಡಿದ. ತನ್ನ ಎತ್ತು ಹಿಂದೆ ಬಿದ್ದುದರಿಂದ ಉಂಟಾದ ಅಪಮಾನದ ಕಿಚ್ಚಿನಲ್ಲಿ, ಶಿವಣ್ಣನ ನಗೆ ಸವುದೆಯನ್ನು ಹಾಕಿದಂತೆ ಎನಿಸಿತು ರುದ್ರಗೌಡನಿಗೆ. ಅಂದು ಶಿವಪ್ಪನ ಮೇಲೆ ಒಳಗೊಳಗೇ ಹಲ್ಲು ಕಡಿದ; ಗೆದ್ದು ಮುಂದಾದ ಗಿರಿಯಪ್ಪಗೌಡರ ಎತ್ತು ಮೆರೆವಣಿಗೆಯೊಂದಿಗೆ ಮುಂದುವರಿಯಿತು. ಆ ಮೆರೆವಣಿಗೆಯ ವಾದ್ಯಧ್ವನಿಯು ರುದ್ರಗೌಡನ ಕಿವಿಗಳಲ್ಲಿ ಅಸಹನೀಯವಾಗಿ ಚುಚ್ಚಿ ಮನಸ್ಸಿಗೆ ನೋವನ್ನುಂಟುಮಾಡಿತು.

* * * *

ರುದ್ರಗೌಡ ಒಂದು ದಿನ ಊರ ಮುಂದಿನ ಹೊಲದ ಕಡೆಗೆ ನಡೆದ. ಆಷಾಢಮಾಸ. ಮುಂಗಾರುಧಾನ್ಯದ ಎಳೆಯ ಬೆಳೆ ಹೊಲದ ನೆಲವನ್ನು ಕುಸುರಿನ ಕಸೀದೆಯಿಂದ ಸಿಂಗರಿಸಿತ್ತು; ಮಾನವಸಂತಾನಕ್ಕೆ ಬೇಕಾಗುವ ಪೌಷ್ಟಿಕ ಆಹಾರವನ್ನು ದೊರಕಿಸುವ ಶಕ್ತಿಸಾಧನೆಯನ್ನು ಸಂಪಾದಿಸಲು ಅದು ಹವಣಿಸುತ್ತಿರುವಂತೆ ಇತ್ತು. ಒಣಗಿದ ಹುಲ್ಲುಕಡ್ಡಿಗಳನ್ನು ತಿಂದು ತಿಂದು ಬೇಸತ್ತ ದನಗಳನ್ನು, ಹಸಿರುಬಣ್ಣದಿಂದ ಆಕರ್ಷಿಸಿ, ತನ್ನೆಡೆಗೆ ಬರಮಾಡಿ ಕೊಳ್ಳುವಂತೆ ಕಾಣುತ್ತಿತ್ತು.

ಗಿರಿಯಪ್ಪಗೌಡರ ಹಿರಿಯಾಳು ಶಿವಪ್ಪ, ಎತ್ತುಗಳನ್ನು ನೀರಿಗೆ ಬಿಟ್ಟಿದ್ದ. ಕಟ್ಟಿ ಮೇಯಿಸುತ್ತಿದ್ದ ಹೊಳೆಸಾಲ ಹೋರಿಯೊಂದು, ಶಿವಪ್ಪನ

ಕೈಯಿಂದ ಕೊಸರಿಕೊಂಡು, ನೆರೆಯಲ್ಲಿಯೇ ಇದ್ದ ಮಲ್ಲನಗೌಡರ ಹೊಲದಲ್ಲಿ ಹೊಕ್ಕಿತು. ಹೇಳಿಕೇಳಿ ದನ; ಬಾಯಿ ಹಾಕಿ ನಾಲ್ಕಾರು ಸಸಿಗಳನ್ನು ತಿಂದು-ಬಿಟ್ಟಿತು. ರುದ್ರಗೌಡ ನೋಡಿದ. ಹೋರಿಯನ್ನು ಹಿಡಿದುಕೊಳ್ಳಲಿಕ್ಕೆ ಶಿವಪ್ಪ ಓಡಿಬಂದ. ರುದ್ರಗೌಡ ಸಿಟ್ಟಿನಿಂದ ಸಿಡಿಯುತ್ತ ನುಡಿದ:

“ಮಂದೀಹೊಲದಾಗ ಹಿಂಗs ಏನೋ ಬಿಡೂದು....ದನಗೋಳನ್ನ?”

ಶಿವಪ್ಪ ಸಹಜಧ್ವನಿಯಲ್ಲಿ ಉತ್ತರಿಸಿದ:

“ನಾ ಏನ ಬೇಕಂತs ಬಿಟ್ಟೇದೀನೇನ್ರಿ! ಕೊಸರಿಕೊಂಡು ಹೊಲ-ದಾಗ ಹೊಕ್ಕೈತ್ರಿ! ಈಗ ಹೊಡಕೊಂಡು ಹೋಗಲಿಕ್ಕಂತs ಓಡಿಬಂದೀನಿ, ಕಾಣಾದಿಲ್ಲೇನ್ರಿ?”

“ಓಡಿ ಏನ ಬರತೀ ಓಡಿ! ಬೇಕಂತಲೇ ಬಿಡೂದು; ಮ್ಯಾಗ ಹಿಂಗ ಏನಾರೇ ಹೇಳೂದು. ನಿನಗ ಸೊಕ್ಕು ಬಂದೈತಿ ಸೊಕ್ಕು!”

“ಇದರಾಗ ಸೊಕ್ಕಿನ ಮಾತೇನ ಬಂತರೀ? ಹೇಳಿಕೇಳಿ ದನಜಾತಿ! ಅದರಾಗ ಕಟ್ಟಿ ಮೇಯಿಸಿದ ಹೋರಿ!”

“ಕಟ್ಟಿ ಮೇಯಿಸಿದ ಹೋರಿ ನಿಮ್ಮದಪ್ಪs ಐತೇನು? ಈ ಕಡೆಯವ-ರಲ್ಲೂ ಇರತಾವು. ನಾವೂ ಹಿಂಗs ನಿಮ್ಮ ಹೊಲದ ಬೆಳೀ ಮೇಯಲಾಕ ಬಿಟ್ಟರ?”

ಶಿವಪ್ಪ ಲೋಕರೂಢಿಯ ಮಾತನ್ನು ಹೇಳಿದ:

“ಬೇಕಂತ್ಲೇ ಯಾರಾದರೂ ಬಿಡತಾರೇನ್ರಿ? ಬೇಕಂತs ಬಿಟ್ಟರ ಯಾರು ಸುಮ್ಮಗಿದ್ದಾರು? ಎಲುವು ಮುರಿಸಿಕೋಬೇಕಾದೀತು ಮಂದೀ ಕಡಿಂದ!”

“ಎಲವು ಯಾರದು ಮುರೀತೀಯೋ ಕತ್ತೀಮಗನs!” ಎಂದು ನುಡಿದವನೇ ರುದ್ರಗೌಡ, ಕೈಯಲ್ಲಿಯ ತಲೆಬಡಿಗೆಯಿಂದ ಶಿವಪ್ಪನ ಬೆನ್ನಮೇಲೆ ಒಂದು ಬಲವಾದ ಏಟನ್ನು ಹಾಕಿದ. ಏಟಿನ ನೋವನ್ನು ಹೊಸಗಿಕೊಳ್ಳುತ್ತ ಶಿವಪ್ಪ “ಹಿಂಗ್ಯಾಕ್ರೀ ಗೌಡರs!” ಎಂದು ಕೇಳು-ತ್ತಿರುವಾಗಲೆ, ಇನ್ನೊಂದು ಅಂತಹದೇ ಏಟು ಎಡಗಡೆಯ ರಟ್ಟೆಯ ಮೇಲೆ ಬಿದ್ದಿತು.

ಶಿವಪ್ಪನೇನು ಸಾಮಾನ್ಯ ಆಳಲ್ಲ. ಅವನು ಬಿದ್ದ ಏಟಿನ ಪರವೆ ಇಲ್ಲದೆ, ಮುಂದುವರಿದು ಬಂದು, ರುದ್ರಗೌಡನ ಕೈಯಲ್ಲಿಯ ಬಡಿಗೆಯನ್ನು ಕಸಿದು-ಕೊಂಡು, ಸಂತಾಪದ ಸ್ವರದಲ್ಲಿ ಹೇಳಿದ:

" ಇಲ್ಲಿ ನೋಡು ಗೌಡಾ! ಬಡಿಯಾಕ ನಿನಗ ಒಬ್ಬ್ಗs ಬರತೈತಿ ಅಂತ ಅಲ್ಲ. ಮಾತು ದೂರಕ್ಕ ಹ್ವಾದೀತಂತ ಈಗ ನಾನು ನಿನ್ನ ಸುಮ್ಮಗs ಬಿಡತೀನಿ. ಇಲ್ಲದಿದ್ದರ ಇಲ್ಲೇ ನಿನ್ನ............ಗುಬ್ಬೀಮರೀ ಹಿಚಿಕಿದ್ಹಾಂಗ ಹಿಚಿಕಿಬಿಡತಿದ್ದೆ!"

ಶಿವಪ್ಪ ರೋಷದಿಂದ ಹೋರಿಗೆ ಸಾಲ್ಕಾರು ಏಟುಗಳನ್ನು ಹಾಕಿ ಹೊಲದಿಂದ ದಾಟಿಸಿಕೊಂಡು ಹೋದ. ಬಡಿಗೆಯನ್ನು ಕೊಡೆಂದು ಗರ್ಜಿಸು-ತ್ತಿರುವ ರುದ್ರಗೌಡನ ಕಡೆಗವನು ಲಕ್ಷ್ಯ ಕೊಡಲೇ ಇಲ್ಲ.

ಮನೆಗೆ ಬಂದು ಶಿವಪ್ಪ ಗಿರಿಯಪ್ಪಗೌಡರೆದುರು, ರುದ್ರಗೌಡನ ನಿಷ್ಕಾರಣ ಜಗಳದ ಕತೆಯನ್ನು ವಿವರಿಸಿದ. ಕಾರಹುಣ್ಣಿವೆಯ ದಿನ ಅವರಿಗೆ ಸೋತಾಗ, ನಾನು ನಕ್ಕುದರ ಸೇಡು ಇದು – ಎಂದು ಹೇಳಿದ. ಅಭಿಮಾನಿ-ಗಳಾದ ಗಿರಿಯಪ್ಪಗೌಡರಿಗೆ, ತಮ್ಮ ಆಳಿಗಾದ ಅಪಮಾನ ಸಹನವಾಗಲಿಲ್ಲ.

ರುದ್ರಪ್ಪ ಶಿವಪ್ಪನನ್ನು ಹೊಡೆದುದು ಕೆಳಗಿನ ಓಣಿಯ ಜನಕ್ಕೆಲ್ಲ ಅವಮಾನವೆನಿಸಿತು. ಅಲ್ಲಲ್ಲಿ ಗುಂಪುಗೂಡಿ ಚರ್ಚೆ ನಡೆಯಿಸಿದರು. ಕೆಲವು ಮುಂದಾಳುಗಳು ಗಿರಿಯಪ್ಪಗೌಡರ ಬಳಿಗೆ ಬಂದು, 'ಈ ಅವಮಾನಕ್ಕ ಮುಯ್ಯಿ ಮುಟ್ಟಿಸಲಾಕs ಬೇಕು!' ಎಂದರು. 'ಈಗ ಸ್ವಲ್ಪ ತಡೀರಿ! ಇನ್ನೂ ನೂರು ತಪ್ಪು ಆಗಿಲ್ಲ' ಎಂದು ಅವರನ್ನು ಸಂತಯಿಟ್ಟು ಕಳುಹಿದರು, ಗಿರಿಯಪ್ಪಗೌಡರು.

* * * *

ನಾಗರಪಂಚಮಿಯು ಹಬ್ಬ ಬಂದಿತು. ಹಳ್ಳಿಗರಿಗೆ ಪಂಚಮಿಯು ಹಬ್ಬ-ವೆಂದರೆ ಎಂದೂ ಇಲ್ಲದಷ್ಟು ಉಲ್ಲಾಸ. ಅತ್ತೆ ಮನೆಯ ಸೊಸೆಯರು ತವರು ಮನೆಯ ಹೆಣ್ಣುಮಕ್ಕಳಾಗಿ, ತಾಯ್ತಂದೆಗಳ ಮಮತೆಯ ಕಾಣಿಕೆಯನ್ನು ಪಡೆವ ಕಾಲವಿದು. ಹಳ್ಳಿಯ ತರುಣರು ಜಿದ್ದು ಪಂಥಗಳನ್ನಾಡಿ, ತಮ್ಮ ಗಂಡುತನವನ್ನು ಪ್ರದರ್ಶಿಸುವ ಸಂದರ್ಭವಿದು.

ಗುಡದೂರಲ್ಲಿ ಸಾರ್ವಜನಿಕವಾಗಿ ಒಂದು ಜೋಕಾಲಿ ಕಟ್ಟಿದ್ದರು. ತರುಣರ ಬಲವನ್ನು ಅಳೆಯುವ ಅಳೆಗೋಲು ಆ ಜೋಕಾಲಿ. ಸಾಮಾನ್ಯರಿಂದ ಅದನ್ನು ತೂಗಿ ಏರಿಸಲಿಕ್ಕೆ ಸಾಧ್ಯವೇ ಇರಲಿಲ್ಲ. ಊರಲ್ಲಿಯ ತರುಣರೆಲ್ಲ ಬಂದು ಬಂದು ಅಲ್ಲಿ ತಂತಮ್ಮ ಬಲದ ಪರೀಕ್ಷೆಯನ್ನು ಮಾಡಿಕೊಳ್ಳುತ್ತಿದ್ದರು. ಹಳ್ಳಿಯ ತರುಣಿಯರ ಬಳಗ— ಹಬ್ಬದ ಸೊಗಸಿನ ಉಡಿಗೆ-ತೊಡಿಗೆಗಳನ್ನು ಧರಿಸಿ— ಅಲ್ಲಿ ಗುಂಪುಗೂಡಿ ನಿಂತು, ತರುಣರ ಸಾಹಸ-ಗಳನ್ನು ನಿರೀಕ್ಷಿಸುತ್ತಿದ್ದಿತು. ಈ ಹೆಂಗುಸರ ನೆರವಿನಲ್ಲಿ ಮಲ್ಲನಗೌಡರ ಮಗಳು ಚೆಲುವಕ್ಕನೂ ಇದ್ದಳು.

ರುದ್ರಗೌಡ ಬಂದು ಜೋಕಾಲಿಯನ್ನು ಹತ್ತಿ ನಿಂತ. ಇದ್ದ ಶಕ್ತಿಯನ್ನೆಲ್ಲ ವೆಚ್ಚಮಾಡಿ ಜೀಕಿಯೇ ಜೀಕಿದ. ಜೋಕಾಲಿ ಅರ್ಧದಷ್ಟೇನೂ ಏರಲಿಲ್ಲ. ಕೂಡಿದ ಜನರು ನಗಲಾರಂಭಿಸಿದರು. ಅವಮಾನವಾದಂತೆನಿಸಿ ರುದ್ರಗೌಡನ ಕೈಗಳು ನಡುಗಹತ್ತಿದವು; ಕಾಲುಗಳು ಕಂಪಿಸತೊಡಗಿದುವು, ಅಲ್ಲಿಯೇ ನಿಂತಿದ್ದ ಶಿವಪ್ಪ ಅಣಕು ಮಾತುಗಳನ್ನಾಡಿದ :

“ಪಂಚಮೀ ತಂಬಿಟ್ಟು ಉಳ್ಳಿ ಬೀಳತ್ತೈತಿ ನೋಡ್ರೀ ಇನ್ನ ! ”

ಜನರೆಲ್ಲ ದೊಡ್ಡ ಧ್ವನಿಯಲ್ಲಿ ನಕ್ಕರು. ಅವಮಾನಿತನಾದ ರುದ್ರ-ಗೌಡ ಜೋಕಾಲಿಯನ್ನು ನಿಲ್ಲಿಸಿ ಕೆಳಕ್ಕಿಳಿದ. ಕೆಕ್ಕರಿಸಿದ ಕಣ್ಣುಗಳಿಂದ ಶಿವಪ್ಪನನ್ನು ನೋಡುತ್ತ ಅಲ್ಲಿಂದ ಸರಿದು ದೂರ ನಿಂತ. ಮತ್ತೆ ಒಬ್ಬಿಬ್ಬರು ತರುಣರು ಜೋಕಾಲಿಯನ್ನೇರಿ ತೂಗಿಕೊಂಡು, ಸೋತು ಕೆಳಕ್ಕಿಳಿದರು.

ಇದ್ದುದಿದ್ದ ಹಾಗೆಯೇ ಮೆಲುನಗೆ ನಗುತ್ತ, ಸೋಮನಾಥ ಜೋಕಾ-ಲಿಯ ಬಳಿ ಬಂದ. ಹೆಂಗುಸರ ನೆರವಿನಲ್ಲಿ ನಿಂತ ಚೆಲುವಕ್ಕ, ಕುತೂಹಲ ತುಂಬಿದ ಕಣ್ಣುಗಳಿಂದ ನೋಡಿದಳು. ತುಂಬಿದ ಮೈಯ ಚೆಲುವ. ಮೊಗಮೀಸೆಯ ವೀರ. ಹಬ್ಬದ ಹೊಸಬಟ್ಟೆ; ಹುಟ್ಟುಚೆಲುವಿಗೆ ಹೊಸ ಚೆಲುವ ಕೊಟ್ಟಿದೆ. ಸೋಮನಾಥ ಬಂದು ನಿಂತು ಜೋಕಾಲಿಗೆ ನಮಸ್ಕಾರ ಮಾಡಿ, ಕೆಳಗಿನಿಂದಲೇ ಒಂದು ತೂಕ ತೆಗೆದುಕೊಂಡು, ಜೋಕಾಲಿಯನ್ನು ಜೀಕತೊಡಗಿದ. ಒಂದು ಸಲವಾಯಿತು, ಎರಡು ಸಲವಾಯಿತು, ಮೂರು

ಸಲವಾಯಿತು. ಸಲಸಲಕ್ಕೂ ಜೋಕಾಲಿ ಮೇಲಕ್ಕೇರಲು ತೊಡಗಿತು. ನೆರೆದ ನೆರವಿಯೆಲ್ಲ ಅಚ್ಚರಿಯಿಂದ ನಿಟ್ಟಿಸುತ್ತಿತ್ತು. ಚೆಲುವಕ್ಕನೂ ನಾಚಿಕೆಯನ್ನು ಮರೆತು ಹೆಮ್ಮೆ-ಹಿಗ್ಗುಗಳಿಂದ ಸೋಮನಗೌಡನ ಸೊಮ್ಮನ್ನು ನೋಡುತ್ತ ನಿಂತಿದ್ದಳು. ಎಂಟನೆಯ ಸಲಕ್ಕೆಂದರೆ ಜೋಕಾಲಿ ಏರಿ ತನ್ನ ಪರಮಾವಧಿಯನ್ನು ಮುಟ್ಟಿತು. ಜನರೆಲ್ಲ 'ಭಲೆ, ಶಾಬಾಸ್, ಭಪ್ಪರೆ!' ಎಂದು ಸೋಮನಾಥನನ್ನು ಹೊಗಳತೊಡಗಿದರು. ರುದ್ರಗೌಡನಿಗೆ ಇನ್ನಿಷ್ಟು ಅವಮಾನವಾದಂತಾಗಿ, ಅಲ್ಲಿ ನಿಲ್ಲಲಿಕ್ಕಾಗದೆ ಹೊರಟು ನಡೆದ. ಚೆಲುವಕ್ಕನ ನೋಟ ಸೋಮನಾಥನಲ್ಲಿ ನೆಲೆನಿಂತು, ಅವನೊಂದಿಗೆ ಉಯ್ಯಾಲೆಯಾಡುತ್ತಿತ್ತು. ಗೆಳತಿಯೊಬ್ಬಳು ಅವಳನ್ನು ಹಿಡಿದಲುಗಿ ಚೇಷ್ಟೆ ಮಾಡಿದಳು!

"ಒಳೇ ಗಟ್ಟುಳ್ಳ ಗಂಡನs ಸಿಕ್ಕಿದಾನೇಳು! ನಿನ್ನ ಮಣಸಾಕ ಇಂತವನs ಬೇಕು!"

ಅಭಿಮಾನದ ಹುಸಿಕೋಪದಿಂದ ಚೆಲುವಕ್ಕ ನುಡಿದಳು:

"ಎಲ್ಲಿ ನಿಂತಲ್ಲೇನs ನಗಿಚಾಟಿಗೇನು? ನಿನಗ ನಾಚಿಗಿ-ಪಾಚಿಗಿ ಏನೂ ಇಲ್ಲ ನೋಡು!" ಎಂದು ನುಡಿದು ಕೆಳಗಣ್ಣು ಮಾಡಿದಳಾದರೂ, ಮನಸ್ಸು ಅವಳ ಮಾತನ್ನು ಕೇಳಲಿಲ್ಲ. ಮತ್ತೆ ಅದು ನೋಟಗಳಿಗೆ ಮೊದಲಿನ ಕೆಲಸವನ್ನೇ ಕೊಟ್ಟಿತು.

ಪರಮಾವಧಿಯನ್ನು ಮುಟ್ಟಿ ಸೋಮನಗೌಡ ಕೆಳಕ್ಕಿಳಿದ. ಜನರೆಲ್ಲ ಅವನನ್ನು ಸುತ್ತುಗಟ್ಟಿ ಶಕ್ತಿಯ ಪ್ರಶಂಸೆ ಮಾಡಿದರು. ಅಂದು ಕೆಳಗಿನ ಓಣಿಯ ಒಕ್ಕಲಿಗರೆಲ್ಲ ಸೇರಿ, ಸೋಮನಗೌಡನನ್ನು ಎತ್ತಿನ ಬಂಡಿಯ ಮೇಲೆ ಕುಳ್ಳಿರಿಸಿ, ವೀರ-ಮೆರವಣಿಗೆ ತೆಗೆದರು. ಊರೆಲ್ಲ ತಿರುಗಿದ ಮೆರವಣಿಗೆ, ಮೇಲಿನ ಓಣಿಯ ಗೌಡರ ಮನೆಯ ಮುಂದೆ ಬಂದಿತು. ನೋಡಲಿಕ್ಕೆಂದು ಆತುರದಿಂದ ಹೊರಟ ಚೆಲುವಕ್ಕನನ್ನು, ರುದ್ರಗೌಡ ಗದ್ದರಿಸಿ ಜೈದು ಒಳಕ್ಕೆ ಕಳುಹಿದ. ನಿರಾಶೆಯ ನೋಟಗಳಿಂದ ಅವಳು ಅಣ್ಣನ ಕಡೆಗೆ ನೋಡುತ್ತ ಒಳಕ್ಕೆ ಹೋದಳಾದರೂ, ಕಿಟಕಿಯಲ್ಲಿ ಹಣಿಯಿಕ್ಕಿ ಮೆರವಣಿಗೆ ನೋಡುವುದನ್ನೇನೂ ಬಿಡಲಿಲ್ಲ. ಆಗಿನ ಸೋಮನ-

ಗೌಡನ ವೀರಪ್ರಸನ್ನ ಮೂರ್ತಿ, ಅವಳ ಹೃದಯದಲ್ಲಿ ನೆಲೆಗೊಂಡು ನಿಂತಿತು—

ರುದ್ರಗೌಡನಿಗೆ ಆ ಮೆರವಣಿಗೆಯನ್ನು ನೋಡಬಾರದೆನಿಸಿದರೂ ನೋಡದೆ ಇರಲಿಕ್ಕಾಗಲಿಲ್ಲ. ಮನೆಯ ಮುಂಗಟ್ಟೆಯ ಮೇಲೆ ಬಂದು ನಿಂತು-ಕೊಂಡ. ಮೆರೆವಣಿಗೆಯ ಬಂಡಿಯ ಮುಂದೆ ನಿಂತಿರುವ ಶಿವಪ್ಪ ಕೆಣಕು-ನಗೆಯನ್ನು ನಗುತ್ತ ರುದ್ರಗೌಡನನ್ನು ನೋಡಲು ತೊಡಗಿದ. ರುದ್ರಗೌಡನಿಗೆ ಸಂತಾಪ ಹೊಟ್ಟೆಯಲ್ಲಿ ಹಿಡಿಸದಂತಾಯಿತು. ಸರ್ರನೆ ಮುಂಗಟ್ಟೆಯ ಮೇಲಿಂದ ಒಳಕ್ಕೆ ನಡೆದುಬಿಟ್ಟ. ಮೆರೆವಣಿಗೆಯ ಜನರೆಲ್ಲ ಕೇಕೆ ಹಾಕಿ, 'ಹುಯ್' ಎಂದು ಕೂಗಿ ನಕ್ಕು. ಬಂಡಿಯನ್ನು ಮುಂದುವರಿಸಿದರು.

ಅಂದೆಯೇ ರುದ್ರಗೌಡ ಮೇಲಿನ ಓಣಿಯ ರೈತರನ್ನೆಲ್ಲ ಕೂಡಿಸಿದ. ಮಲ್ಲನಗೌಡರ ಔದಾರ್ಯದ ಮೂಲಕ ಅವರೆಲ್ಲ ಒಂದಿಲ್ಲೊಂದು ಬಗೆ-ಯಿಂದ ಈ ಮನೆತನಕ್ಕೆ ಋಣಿಯಾಗಿದ್ದರು. ಇತ್ತೀಚೆಗೆ, ಮನೆಯ ಹಿರಿಯ ಮಲ್ಲನಗೌಡರು ಅರ್ಧಾಂಗವಾಯುವಿನಿಂದ ಹಾಸಿಗೆ ಹಿಡಿದುದು ಅವರಿಗೆಲ್ಲ ಅಸಮಾಧಾನದ ಸಂಗತಿಯಾಗಿತ್ತು. ತಮ್ಮ ಗೌಡರ ಮಗನಿಗೆ—ಗೌಡರ ಮನೆತನಕ್ಕೆ— ಅಪಮಾನವಾಗುವಂತೆ, ಕೆಳಗಿನ ಓಣಿಯ ಜನರು ಸೋಮನ ಗೌಡನ ಮೆರೆವಣಿಗೆ ತೆಗೆದುದು ಮೇಲಿನ ಓಣಿಯವರ ಮನಸ್ಸಿಗೆ ಬಂದಿರಲಿಲ್ಲ. ರುದ್ರಗೌಡ ಆ ಜನರ ಎದುರು, ಗಿರಿಯಪ್ಪಗೌಡರ ಮನೆತನದ ಅಹಂಕಾರ-ಹೆಮ್ಮೆಗಳ ಸಂಗತಿಗಳನ್ನು ಕಕ್ಕಿಕಟ್ಟಿ, ಉಪ್ಪುಕಾರ ಹಚ್ಚಿ ಹೇಳಿದನು. ಅವರ ಮನೆಯ ಆಳು ಶಿವಪ್ಪನು ತನಗೆ ಮಾಡಿದ ಅಪಮಾನದ ವಿಚಾರವನ್ನೂ ವಿವರಿಸಿದನು. ಓಣಿಯ ಕೆಲವು ತರುಣರಿಗೆ, ತಮ್ಮ ಗೌಡರ ಮನೆತನಕ್ಕೂ— ಮಗನಿಗೂ ಆದ ಅವಮಾನ ಅಸಹನೀಯವಾದುದೆಂದು ಕಂಡಿತು. ಈ ಅವಮಾನಕ್ಕೆ ಪ್ರತಿಫಲವನ್ನು ಸೇರಿಗೆ ಸವ್ವಾಸೇರಿನಂತೆ ಮುಟ್ಟಿಸಬೇಕೆಂಬ ಆತುರ ಅವನಲ್ಲಿ ಹೆಚ್ಚಿದುದು, ಅಂದಿನ ಅವರ ಮಾತು-ಕತೆಗಳಿಂದ ಚೆನ್ನಾಗಿ ವ್ಯಕ್ತವಾಯಿತು. ಇದನ್ನೆಲ್ಲ ಕೇಳುತ್ತಿದ್ದ ಚೆಲುವಮ್ಮ ಒಳಗೊಳಗೇ ಮಿಡುಕುತ್ತಿದ್ದಳು. ಬಂದವರಿಗೆ ರುದ್ರಗೌಡ ಪಂಚಮಿಯ ಫಳಾರ ಕೊಡಿಸಿದ.

* * * *

ಚೆಲುವಮ್ಮನು ಮೈನೆರೆದ ಸಮಾಚಾರ, ಬೀಯಗರ ಮನೆಗೆ ಹೊರಹೊರಗಿಂದಲೇ ತಿಳಿಯಿತಲ್ಲದೆ, ಪದ್ಧತಿಯಂತೆ ಅವರಿಗೆ ಯಾರೂ ಹೇಳಿಕಳುಹಲಿಲ್ಲ. ರುದ್ರಪ್ಪಗೌಡ ನಡೆಯಿಸಿದ್ದ ಆಂತರಿಕ ಯೋಜನೆಗಳು ಏನೆಂಬುದು ಯಾರಿಗೂ ಗೊತ್ತಾಗುವಂತೆ ಇರಲಿಲ್ಲ. ತಂಗಿ ನೆರೆದ ಸಮಾಚಾರವನ್ನು ಅವಳತ್ತೆಯ ಮನೆಗೆ ಹೇಳಿಕಳುಹಲಾಗದೆಂದು ಮನೆಯಲ್ಲಿ ಕಟ್ಟಪ್ಪಣೆ ಮಾಡಿದ್ದ. ಕರೆಕಳುಹದೆ ಇದ್ದಮೇಲೆ ಬೀಯಗರು ಇಲ್ಲಿಗೆ ಬರುವುದಾದರೂ ಹೇಗೆ? ಮೈನೆರೆಸು ಮಂಟಪದಲ್ಲಿ ಕುಳಿತ ಚೆಲುವಕ್ಕನ ಮುಖದ ಮೇಲೆ ಗೆಲುವಿನ ಕಳೆಯೇ ಇರಲಿಲ್ಲ ಅವಳ ಮನಸ್ಸು ಯಾರ ಬರವನ್ನು ಹಾರಯಿಸುತ್ತಿರಬಹುದು ?

ಎಲ್ಲರೂ ಬಿಟ್ಟರೂ, ಗಿರಿಯಪ್ಪಗೌಡರ ಮನೆಯ ಒಕ್ಕಲುಗಿತ್ತಿ ನಾಗಮ್ಮ, ಅಲ್ಲಿಗೆ ಹೋಗುವುದನ್ನು ಬಿಡಲಿಲ್ಲ. ಮಂಟಪದಲ್ಲಿ ಸಿಂಗಾರವಾಗಿ ಕುಳಿತ ಚೆಲುವಕ್ಕನನ್ನು ಕಣ್ಣಾತುಂಬ ನೋಡಿ, ನಿಂತಲ್ಲಿಂದಲೇ ತನ್ನ ಎರಡೂ ಕೈಗಳಿಂದ ನಿವಾಳಿ ತೆಗೆದು, ಹಿಗ್ಗು ತುಂಬಿದ ಹೃದಯದಿಂದ ಮನೆಗೆ ಮರಳಿದಳು.

ನಾಗಮ್ಮ ಮನೆಯಲ್ಲಿ ಎಲ್ಲರಿಗೂ ಸಲುಗೆಯ ಮುದುಕಿ. ಮನೆಗೆ ಬಂದವಳೇ ಮೊದಲು ಸೋಮನಾಥನ ಬಳಿಗೆ ಹೋಗಿ ನುಡಿದಳು :

“ ಸೋಮಗೊಂಡಾ ! ನಿನ್ನ ಪುಣ್ಯ ಬಾಳ ದೊಡ್ಡದು ನೋಡು ! ”

ಸೋಮನಾಥ ಆಶ್ಚರ್ಯದಿಂದ ಕೇಳಿದ :

“ ಅದೇನ ಕಂಡೆವ್ವಾ ಮುದುಕೀ, ನನ್ನ ದೊಡ್ಡ ಪುಣ್ಯಾ ? ”

“ ನಿನ್ನ ಹೇಣ್ತಿ ನೆರದ್ಯಾಳಲ್ಲ ! ನನ್ನ ಜೀವ ತಾಳಲಿಲ್ಲ. ಹೋಗಿ ನೋಡಿಬಂದೆ. ಮಾದೇವಿ ಮಕರದಾಗ ಕುಂತುಕೊಂಡಾಳು. ಏನ ಚೆಲುವಿಕೆಪ್ಪಾ ಅವಳ ಚೆಲುವಿಕೆ ! ಸುದ್ದ ಜೀನಗಾರ ಗೊಂಬಿ ಬ್ಯಾರೇ ಅಲ್ಲಾ, ಆಕಿ ಬ್ಯಾರೇ ಅಲ್ಲಾ ! ಹಂತಾ ಹೇಣತಿನ್ನ ಪಡೆಯೂವಂದರ, ನಿನ್ನ ಪುಣ್ಯೇ ದೊಡ್ಡದಲ್ಲಾ ತಮ್ಮಾ ! ”

ಸೋಮಣ್ಣನ ಹೃದಯ ಅಭಿಮಾನದಿಂದ ಹಿಗ್ಗಿತು. ಅಂದು ಜೋಕಾಲಿಯಾಡುವಾಗ, ತನ್ನನ್ನು ಒಲವಿನ ನೋಟದಿಂದ ನೋಡುತ್ತ ನಿಂತ ಚೆಲುವಕ್ಕನನ್ನು ಅವನೂ ನೋಡಿದ್ದ. ಅಂದಿನ ನೆನಪು, ಹೊಸಹರಯದ ಆ

ಹುಡುಗನನ್ನು ಆಗಾಗ ಕೆಣಕುತ್ತಿತ್ತು. ಇಂದು ನಾಗಮ್ಮ ಮಾಡಿದ— ತನ್ನ ಹೆಂಡತಿಯ— ಚೆಲುವಿಕೆಯ ವಿಸ್ತಾರ ಕೇಳಿ, ಅವನ ಮೈಮನಗಳಲ್ಲಿ ಮಿಂಚು ಹರಿದಾಡಿತು. ನರನರಗಳನ್ನು ಜುಮ್ಮುಜುಮ್ಮೆನಿಸಿತು. ಮುದುಕಿ ಮತ್ತೆ ಮಾತನಾಡಿದಳು:

“ಹಂತಾ ಗೌರಿಯಂತಾ ಹೇಣತಿನ್ನ ಕೂಡಿಕೊಂಡು ನೀನು ಬಾಳೇ ಮಾಡೋದನ್ನ, ಎಂದು ಕಂಡೇನು... ಅಂತ ನನ್ನ ಕಣ್ಣು ಹಾತೊರೀತಾವ ನೋಡು! ಅಲ್ಲಾ ತಮ್ಮಾ, ಈಗ ಮೂರು ದಿಸಾ ಆತು....ಹುಡುಗಿ ಮೈ-ನೆರೆದು; ಹೇಳಿಕಳವ ಬಾರದೂ ನಮ್ಮ ಮನೀಗೆ? ಎಂತೆಂತಾ ಮಂದಿ ಇರ-ತಾರ ನೋಡಪ್ಪಾ..........ಲೋಕದಾಗ!” ಎಂದು ನುಡಿದು, ಮುದುಕಿ ಮೆಲ್ಲಗೆ ಎದ್ದು ಹೊರಟಳು; ಸೋಮನಾಥ ಏನೇನನ್ನೋ ಯೋಚಿಸುತ್ತ ಕುಳಿತಲ್ಲಿಯೇ ಕುಳಿತಿದ್ದ.

* * * *

ಬಹಳ ಹೊತ್ತಿನ ವರೆಗೆ ಸೋಮನಾಥ ಯೋಚಿಸುತ್ತಲೇ ಇದ್ದ. ಏನನ್ನೋ ಕಳೆದುಕೊಂಡಂತೆ ಅವನ ಮನಸ್ಸು ಹಳಹಳಿಸುತ್ತಿತ್ತು. ಹಾಗೆಯೆ ಎದ್ದು ಮೈಮೇಲೆ ಬಟ್ಟೆ ಹಾಕಿಕೊಂಡ; ಮನೆಯಿಂದ ಹೊರಕ್ಕೆ ಹೊರಟು, ಮೇಲಿನ ಓಣಿಯ ಕಡೆಗೆ ನಡೆದ. ಕೆಲಸವಾವುದೂ ಇಲ್ಲದಿದ್ದರೂ, ಏನೋ ಮಹತ್ತ್ವದ ಕೆಲಸವಿದ್ದವರಂತೆ ಮಲ್ಲಪ್ಪಗೌಡರ ಮನೆಯೆದುರು ಹಾಯ್ದು ಮುಂದೆ ನಡೆದ; ಮತ್ತೆ ಮೂರು-ನಾಲ್ಕು ನಿಮಿಷಗಳಲ್ಲಿಯೆ ಹಿಂದಿರುಗಿ ಅದೇ ದಾರಿಯನ್ನು ಹಿಡಿದು ಬಂದ. ಮನೆಯೊಳಗಿಂದ ಹೊರಗೆ ಬರುವ ಮುತ್ತೈದೆ-ಯರಲ್ಲಿ ಒಬ್ಬಾಕೆ ಮೆಲ್ಲಗೆ ನುಡಿದಳು:

“ಅಯ್ಯ, ಸೋಮನಗೌಡ! ಏ ಪಾರೂ ಚೆಲುವಕ್ಕನ ಗಂಡ ಇವರ ನೋಡು!”

ಪಾರುವು ಸೋಮಣ್ಣನನ್ನು ನೋಡಿದಳು. ಸೋಮಣ್ಣ ಪಾರುವನ್ನು ನೋಡಿದ. ಪಾರುವೂ ಹೊಸಮೊದಲಗಿತ್ತಿ. ಕಣ್ಣು-ಮೂಗಿನಿಂದ ಚೆಲುವಿ. ಸೋಮನಗೌಡ ತಿರುಗಿ ನೋಡಿದ. ಎದೆ ಡಡಡಡಿಸಿತು. ಪಾರುವು ಮೆಲ್ಲಗೆ ಹೇಳಿದಳು:

"ಚೆಲುವಕ್ಕಗ ತಕ್ಕವನಾದ ಗಂಡ! ಅವಳದೂ ಪುಣ್ಯ; ಇವನದೂ ಪುಣ್ಯ!"

ಸೋಮನಾಥನ ಕಣ್ಣೆದುರು ಚೆಲುವಕ್ಕನ ಮೂರ್ತಿ ಸುಳಿದು ಹೋಯಿತು. ಗೌಡರ ಬಾಗಿಲಲ್ಲಿ ನಸುವೇಳೆ ನಿಂತು, ತಲೆ ಎತ್ತರಿಸಿ ನೋಡಿದ. ಒಳಗಿನದು ಏನೂ ಕಾಣದಿರಲು, ನಿರಾಶೆಗೊಂಡು ಮತ್ತೆ ಮನೆಗೆ ಬಂದ. ಮೊಗಸಾಲೆಯಲ್ಲಿ ಸುಮ್ಮಗೆ ಕುಳಿತುಕೊಂಡ. ಮತ್ತೆ ಮೇಲಕ್ಕೆದ್ದು ಮನೆಬಿಟ್ಟು ಹೊರಟು ನಡೆದ. ಎಲ್ಲಿಗೆ ಹೋಗಬೇಕೆಂಬುದು ಗೊತ್ತಿಲ್ಲ— ಕಾಲು ಸಾಗಿದತ್ತ ನಡೆದಿದ್ದ.

ಅಂದು ಶಿವಪ್ಪ ಎಡೆ ಹೊಡೆಯಲಿಕ್ಕೆಂದು ಕುಮರಿಯ ಹೊಲಕ್ಕೆ ಹೋಗಿದ್ದ. ಸೋಮನಾಥ ಈಗ ನಡೆದುದು ಅದೇ ಹೊಲದ ದಾರಿಯನ್ನು ಹಿಡಿದು. ಎದುರು ಬರುವವರೆಲ್ಲ ಸೋಮನಗೌಡನಿಗೆ 'ಶರಣಾರ್ಥಿ' ಹೇಳಿ ಮುಂದೆ ಸಾಗುತ್ತಿದ್ದರು. ಜಡಮನಸ್ಸಿನವನಾಗಿ ಆತ ಮುಂದುವರಿದಿದ್ದ. ಶಿವಪ್ಪನ ಜೊತೆಗೆ ಹೋದ ಆಳುಗಳು ಎತ್ತು-ಗಳೆಗಳೊಂದಿಗೆ ಎದುರಾದರು. ಅವರೊಡನೆ ಶಿವಪ್ಪನಿರಲಿಲ್ಲವೆಂಬುದರ ಅರಿವೂ ಸೋಮನಗೌಡನಿಗೆ ಇರಲಿಲ್ಲ. ಅಡ್ಡವೇಳೆಯಲ್ಲಿ ಸಣ್ಣಗೌಡರು ಹೊಲಕ್ಕೆ ಹೊರಟುದು ಆಳುಗಳ ಆಶ್ಚರ್ಯಕ್ಕೆ ಕಾರಣವಾಯಿತಾದರೂ, ಏಕೆಂದು ಕಾರಣ ಕೇಳುವ ಧೈರ್ಯ ಅವರಿಗಾಗಲಿಲ್ಲ. ಹಾಗೆಯೇ ಮುಂದೆ ಸಾಗಿದರು.

ಸೂರ್ಯನು ಪಡುವಣ ಬೆಟ್ಟದ ಹಿಂದೆ ಮರೆಯಾಗಿದ್ದನು. ಟಿಂವಕ್ಕಿಯೊಂದು ಸಿಡಿಯುತ್ತ ನೆತ್ತಿಯ ಮೇಲೆ ಹಾರಿತು. ದೂರದ ಹೊಲದಲ್ಲಿ ನಾಯಿಯೊಂದು ಅಳುವುದು ಕೇಳುತ್ತಿತ್ತು. ಯಾವುದರ ಕಡೆಗೂ ಸೋಮನಾಥನ ಲಕ್ಷ್ಯವಿಲ್ಲ. ಮುಂದೆ ಮುಂದೆ ಹೆಜ್ಜೆ ಹಾಕುತ್ತಲಿದ್ದ. ಕುಮರಿಯ ಹೊಲ ತಲ್ಪಿದಾಗ ಹೊತ್ತು ಮುಳುಗಿ ಬೆಳಕು ಮಬ್ಬಾಗಿತ್ತು. ಹೊಲಕ್ಕೆ ಬಂದು ಸೋಮನಾಥ, ನಿರುದ್ದೇಶದಿಂದಲೇ ದಿಕ್ಕುಗಳನ್ನು ನಿಟ್ಟಿಸಿದ. ಹೊಲದ ಆಚೆಯ ತುದಿಯಲ್ಲಿ, ದೂರ, ಮಸುಕು-ಮಸುಕಾಗಿ ಎಂಟು ಹತ್ತು ಜನರು ಕಂಡರು. ನೋಡುತ್ತ ನಿಂತಿದ್ದ ಹಾಗೆಯೇ 'ಅಯ್ಯೋ, ಅಯ್ಯೋ' ಎಂಬು ಯಾರೋ ಕಿರುಚಲು ತೊಡಗಿದುದು ಕೇಳಿಸಿತು. ಮುಂಗಾರಿನ ದಿನಗಳು; ಗುಡ್ಡದ ಬಳಿಯ ಹೊಲ; 'ಅಯ್ಯೋ' ಎಂಬ ಕೂಗು ಮೊದಲೊಂದು

ಸಲ ಭೀತಿ ಹುಟ್ಟಿಸಿತು. ಒಮ್ಮಿಂದೊಮ್ಮೆಲೆ ಸೋಮನಗೌಡನಿಗೆ ಮೈಮೇಲೆ ಎಚ್ಚರು ಬಂದಂತಾಯಿತು ಮತ್ತೆ ಮತ್ತೆ ಕೇಳಿಬರುತ್ತಿದ್ದ ಕೂಗು ಕುತೂಹಲವನ್ನು ಕೆರಳಿಸಿತು. ನಿಟ್ಟೋಟದಿಂದ ಅವನು ಓಡತೊಡಗಿದ. ಓಡಿ ಓಡಿ ಹೊಲದ ಆಚೆಯ ತುದಿಯನ್ನು ತಲ್ಪಿದ.

ಅಲ್ಲಿಗೆ ಹೋದಾಗ ಅವನು ಕಂಡುದೇನು? ಎದೆಯನ್ನು ನಡುಗಿಸುವಂತಹ ದೃಶ್ಯ! ರುದ್ರಗೌಡ ಕೈಯಲ್ಲೊಂದು ಕಬ್ಬಿಣದ ಬಡಿಗೆ ಹಿಡಿದುಕೊಂಡು, ನಾಯಕನ ಠೀವಿಯಲ್ಲಿ ನಿಂತಿದ್ದಾನೆ. ಏಳೆಂಟು ಜನ ತರುಣರು ಸೇರಿ, ಶಿವಪ್ಪನನ್ನು ಗುಡ್ಡದ ಬಳಿಯ ಗಿಡಕ್ಕೆ ಬಿಗಿದು ಕಟ್ಟಿದ್ದಾರೆ. ಇಬ್ಬರು ತರುಣರು ಬಾರುಕೋಲುಗಳನ್ನು ಹಿಡಿದುಕೊಂಡು ನಿಂತು, ಸರದಿಯಂತೆ ಶಿವಪ್ಪನನ್ನು ಸೆಳೆಯುತ್ತಲಿದ್ದಾರೆ. ಪರಾಧೀನನಾದ ಶಿವಪ್ಪ, ಏಟನ್ನು ತಾಳದೆ 'ಅಯ್ಯೋ!' ಎಂದು ಕೂಗುತ್ತಿದ್ದಾನೆ.

ಸೋಮನಾಥ ಒಮ್ಮೆಲೆ ನುಗ್ಗಿ ಶಿವಪ್ಪನ ಬಳಿಗೆ ಬಂದ. ಬಾರುಕೋಲು ಹಿಡಿದು ನಿಂತವನೊಬ್ಬನನ್ನು ಕೈಯಿಂದ ಗುದ್ದಿ, ಬಾರುಕೋಲನ್ನು ಕಸಿದು ಕೊಂಡ. ಇನ್ನೊಬ್ಬನ ಮೇಲೆ ಎರಗಬೇಕೆನ್ನುವಷ್ಟರಲ್ಲಿಯೆ ಏಳೆಂಟು ಜನರೆಲ್ಲ ಒಮ್ಮೆಲೆ ಸೋಮನಾಥನ ಮೇಲೆ ಏರಿಬಂದರು; ಅವನನ್ನು ಒತ್ತಿಹಿಡಿಯಲು ಗುದ್ದಾಡತೊಡಗಿದರು. ತುಂಬ ಧಡಪಡಿಸಿದ. ಬಳಿಯಲ್ಲಿ ಕಂಡ ರುದ್ರಗೌಡನನ್ನು ಝಾಡಿಸಿ ಒದೆಯಲು, ಸಿಡಿದು ಹೋಗಿ ಆತ ಮುಳ್ಳುಕೊಂಪೆಯೊಂದರಲ್ಲಿ ಬಿದ್ದುಕೊಂಡ.

ಬಹುಜನರ ಮುಂದೆ ಒಬ್ಬನ ಆಟ ಎಷ್ಟು ಹೊತ್ತು ನಡೆದೀತು? ಎಲ್ಲರೂ ಒಟ್ಟುಗೂಡಿ ಹಿಡಿದು, ಸೋಮನಾಥನ ಕೈಕಾಲುಗಳನ್ನು ಬಿಗಿದು ಕಟ್ಟಿ ಚೆಲ್ಲಿದರು. ಆಮೇಲೆ ಮುಳ್ಳಿನಲ್ಲಿ ಬಿದ್ದು ಒದ್ದಾಡುತ್ತಿದ್ದ ರುದ್ರಗೌಡನನ್ನು ಕಡೆಗೆ ತೆಗೆದರು. ನೋವಿನಿಂದಲೂ, ಅಪಮಾನದಿಂದಲೂ ಮೈಮರೆತಿದ್ದ ರುದ್ರಗೌಡ. ಅಂತಹದರಲ್ಲಿಯೇ ಕುಂಟುತ್ತ ಬಂದು, ಕೈಯ ಕಬ್ಬಿಣದ ಕೋಲಿನಿಂದ ಸೋಮಣ್ಣನ ಕಣಕಾಲ ಮೇಲೆ ಅಪ್ಪಳಿಸಿದ. ಮೂಳೆಗಳು ಮುರಿದಿರಬಹುದು. ಸೋಮನಾಥ ನೋವಿನಿಂದ ಕೂಗಿಕೊಂಡ. ಕಾಡಿನಲ್ಲಿ ಮರುದನಿಗಳೆದ್ದುವು.

ರುದ್ರಗೌಡ ಜನರಿಗೆ ಆಜ್ಞಾಪಿಸಿದ :

“ ಆ ಶಿವ್ಯಾನ್ನ ಜೀವಸಹಿತ ಬಿಡಬ್ಯಾಡ್ರಿ ! ಬದಿಕಿ ಉಳಿದರ ಮತ್ತ ನಮ್ಮ ಜೀವಕ್ಕs ಮುಳುವು ! ಈ ಸೋಮ್ಯಾ, ಕಾಲ ಮುರುಕೊಂಡು ಇಲ್ಲೀ ಬೀಳವೊಲ್ಲನ್ಯಾಕ ! ”

ಆಗ ಆ ಜನರ ಕೈಯನ್ನು ಹಿಡಿಯಲಿಕ್ಕೆ, ಇನ್ನೊಂದು ಬಣದವರು ಯಾರೂ ಅಲ್ಲಿ ಇರಲೇ ಇಲ್ಲ.

*   *   *   *

ಅಂದಿಯೇ ರಾತ್ರಿ ಚೆಲುವಕ್ಕನಿಗೆ ವೈನೆರೆದ ಮೂರನೆಯ ದಿನದ ಆರತಿ ನಡೆದಿತ್ತು. ಎಲ್ಲ ಮುತ್ತೈದೆಯರೊಂದಿಗೆ ಪಾರೂ ಕೂಡ ಅಲ್ಲಿಗೆ ಬಂದಿದ್ದಳು. ಆರತಿ ಮುಗಿದ ಮೇಲೆ ಚೆಲುವಕ್ಕನಿಗೆ ಪಾರೂ ಹೇಳಿದಳು :

“ ಚೆಲುವಕ್ಕಾ, ಇಂದ ನಾ ನಿನ್ನ ಗಂಡನ ನೋಡಿದೆ. ಇಲ್ಲೀ ನಿಮ್ಮ ಮನೀ ಮುಂದsನs ! ನಿನ್ನ ದೈವದ ಮುಂದ ಇನ್ಯಾರ ದೈವನೂ ಇಲ್ಲ. ಒಳ್ಳೀ ಲೈಲಾ-ಮಜನೂನ ಜೋಡೀ ನೋಡು ನಿಮ್ಮದು ! ”

ಚೆಲುವಕ್ಕ ಹೆಮ್ಮೆ- ನಾಚಿಕೆ ಕೂಡಿದ ಮೆಲುನಗೆ ನಗುತ್ತ ಮುಖ ತಗ್ಗಿಸಿದಳು. ಎಡಪಕ್ಕದ ಮೂಲೆಯೊಳಗಿಂದ ಹಲ್ಲಿಯೊಂದು ಲೊಟಗುಟ್ಟಿದ ಶಬ್ದ ಕೇಳಿಸಿತು. ಚೆಲುವಕ್ಕನ ಎದೆ ನಡುಗಿ ಮೈ ಜುಮ್ಮೆಂದಿತು. ಪಾರೂ ‘ ಶಿವ ಶಿವ ಶಿವ ! ’ ಎಂದಳು.

# ದನಗಾಹಿ

'ದನಗಾಹಿ' ಎಂಬುದೊಂದು ನಮ್ಮ ನಾಡಿನಲ್ಲಿ ಬೈಗುಳ ಮಾತಾಗಿ ರೂಢವಾಗಿದೆ. 'ದನಗಾಹಿ' ಎಂದರೆ ಬುದ್ಧಿಯಿಲ್ಲದವ— ಎಂದು ಅರ್ಥ. ಒಂದು ವಿಚಿತ್ರ ನೋಡಿ: ನಿಜವಾಗಿಯೂ ಬೈಗುಳ ಮಾತಾಗಿದ್ದ 'ಬೆರಕಿ' 'ಗುಲಾಮ' 'ಹರಾಮಿ' 'ಲುಚ್ಚಾ' 'ಖದೀಮ್' ಮುಂತಾದ ಪದಗಳು ನಮ್ಮಲ್ಲಿ ಹೊಗಳಿಕೆಯ ಮಾತಾಗಿ ಬಳಕೆಯಲ್ಲಿದ್ದರೆ, 'ದನಗಾಹಿ' 'ಕುರುಬ' 'ಕುಂಬಾರ' ಮೊದಲಾದ ಉದ್ಯೋಗವಾಚಕ ಪದಗಳು, ತೆಗಳಿಕೆಯ ಪ್ರತಿನಿಧಿಗಳಾಗಿ ಜನರ ಬಾಯಲ್ಲಿ ಇವೆ. ಇದರ ಅರ್ಥವಿಷ್ಟೇ, ಮೈಗಳ್ಳನಾಗಿದ್ದು ಮೋಸ-ಕವಡುಗಳಿಂದ ಹೊಟ್ಟೆ ತುಂಬಿಕೊಳ್ಳುವುದು ನಮ್ಮ ಜನಕ್ಕೆ ಬುದ್ಧಿವಂತಿಕೆಯಾಗಿ ತೋರಿತು; ಮೈಮುರಿಯೆ ದುಡಿದು ಕಷ್ಟದಿಂದ ಹೊಟ್ಟೆ ತುಂಬಿಕೊಳ್ಳುವುದು ಮಡ್ಡತನವಾಗಿ ತೋರಿತು.

ಇದಕ್ಕೆ ಪ್ರತ್ಯಕ್ಷ ಉದಾಹರಣೆಯೆಂದರೆ, ಶ್ರೀವಾನ್ ಅಂಗಡಿ ವಕೀಲರು ಮತ್ತು ಅವರ ಮನೆಯ ಆಳು ಗಂಗಣ್ಣ. ಇವರಿಬ್ಬರ ಬದುಕನ್ನು ತೂಗಿ ನೋಡಿದರೆ, ನಮ್ಮ ಸಮಾಜ ಯಾವ ಮಟ್ಟದಲ್ಲಿದೆ ಎಂಬುದು ಒಡೆದು ಕಾಣುವುದು.

ಶ್ರೀ ಅಂಗಡಿ ವಕೀಲರು ಕ್ರಿಮಿನಲ್ ಮೊಕದ್ದಮೆಗಳನ್ನು ನಡೆಯಿಸುವುದರಲ್ಲಿ ಹೆಸರುವಾಸಿಯಾದವರು. ಎಂತೆಂತಹ ಕಳ್ಳರು-ಕೊಲೆಗಾರರನ್ನೂ ತಮ್ಮ ಬುದ್ಧಿವಂತಿಕೆಯಿಂದ ನಿರಪರಾಧಿಗಳನ್ನಾಗಿಸಿದ ಕೀರ್ತಿ ಇವರಿಗಿದೆ. ಇವರ ಬುದ್ಧಿಶಾಲಿತ್ವದ ಫಲವಾಗಿ, ಎರಡೆರಡು ಮೂರು ಮೂರು ಸಲ ಖೂನಿ ಮಾಡಿ ಬದುಕಿ ಉಳಿದಿರುವ ಹಲವು ಜನ ಬಂಟರು, ಬೇರೆ ಹೊಸ ಬೇಟೆಗಳನ್ನು ಹುಡುಕುತ್ತ ತಿರುಗುತ್ತಿದ್ದಾರೆ.

ತಮ್ಮ ಕಡೆಗೆ ಬಂದ ಅಪರಾಧಿಗಳನ್ನು ಉಳಿಸುವುದಕ್ಕಾಗಿ ಈ ವಕೀಲರು, ಸುಳ್ಳು ಹೇಳುವ ಸಾಕ್ಷಿದಾರರನ್ನು ಹೇಗೆ ಹೇಗೆ ತಯಾರು ಮಾಡುತ್ತಾರೆ;

ಹೇಗೆ ಹೇಗೆ ತರಬಿಯತ್ತುಗೊಳಿಸುತ್ತಿರುತ್ತಾರೆ ! ಯಾವ ಚಾಣಾಕ್ಷ ಶಿಕ್ಷಕನೂ ಇವರ ಶಿಕ್ಷಣಕ್ರಮವನ್ನು ಸಂಗಟ್ಟಲಾರ. ಈ ಸುಳ್ಳುಗಾರ ವಿದ್ಯಾರ್ಥಿಗಳೇ—ವಕೀಲರ ಬಳಿ ಬರುವ ಎಂತೆಂತಹ ಅಪರಾಧಿಗಳನ್ನೂ ಬದುಕಿಸುತ್ತಾರೆ; ವಕೀಲರ ಮನೆಯನ್ನು ಸಂಪತ್ತಿನಿಂದ ತುಂಬಿ ತುಳುಕಿಸುತ್ತಾರೆ. ಈ ಸುಳ್ಳಿನ ಶಿಕ್ಷಣದ ಉದ್ಯೋಗದಿಂದಲೇ ಇವರು ನಗರದಲ್ಲಿ ಮನೆ ಮಾಡಿ ಮಾನ್ಯರೆನಿಸಿ-ಕೊಂಡರು. ಮನೆಯ ಮೇಲೆ ಹೊಸ-ಹೊಸತಾಗಿ ಮಾಳಿಗೆಗಳನ್ನು ಏರಿಸಿದರು. ಬ್ಯಾಂಕುಗಳ ಡೈರೆಕ್ಟರರಾದರು. ಕಂಪನಿ-ಕಾರ್ಖಾನೆಗಳಲ್ಲಿ ಪಾಲು-ಗಾರರಾದರು. ನಗರಸಭೆಯ ಅಧ್ಯಕ್ಷರೂ ಆದರು. ಎಲ್ಲೆಲ್ಲಿಯೂ ಇವರಿಗೆ ಮಾನ-ಸನ್ಮಾನಗಳು; ಔತಣ ಉಪಚಾರಗಳು.

ಇನ್ನು ಗಂಗಣ್ಣನ ವಿಚಾರ : ಇವನು ವಕೀಲರ ಮನೆಯಲ್ಲಿ ದನಗಾಹಿ-ಯಾಗಿ ಇದ್ದಾನೆ. ಒಂದೇ ಒಂದು ಸಲ ಇವನು ಸುಳ್ಳು ಹೇಳಲಿಕ್ಕೆ ಮನಸ್ಸು ಮಾಡಿದ್ದರೆ, ತನ್ನ ಊರಲ್ಲಿಯೇ ಸ್ವತಂತ್ರನಾಗಿ—ತನ್ನ ಮನೆಯ ಯಜ-ಮಾನನಾಗಿ ಬಾಳಬಹುದಾಗಿತ್ತು. ಬಯಸಿದ ಹೆಣ್ಣು ಇವನ ಮನೆಗೆ ಬಂದು, ಒಲವಿನ ಹೊಳೆಯಲ್ಲಿ ಓಲಾಡಬಹುದಾಗಿತ್ತು. ಆದರೆ ಈ 'ದನಗಾಹಿ' ಸುಳ್ಳು ಹೇಳಲಿಕ್ಕೆ ಸಿದ್ಧನಾಗಲಿಲ್ಲ. ಆದುದರಿಂದಲೇ ತನ್ನ ಜೀವನದ ಸವಿಗನಸನ್ನೆಲ್ಲ ಹಾಳುಮಾಡಿಕೊಂಡ; ತನ್ನವರಿಗೆ ವಿರೋಧಿಯಾಗಿ, ಇದ್ದ ಮನೆ ಮಾರನ್ನು ಕಳೆದುಕೊಂಡು, ಇನ್ನೊಬ್ಬರ ಮನೆಯಲ್ಲಿ ಊಳಿಗಕ್ಕೆ ನಿಂತುಕೊಂಡ.

ಗಂಗಣ್ಣ ಬೆಳೆದು ದೊಡ್ಡವನಾದ ಊರು ಗೊಲ್ಲಹಳ್ಳಿ. ಚಿಕ್ಕತನ-ದಲ್ಲಿಯೇ ತಂದೆ-ತಾಯಿಗಳನ್ನು ಕಳೆದುಕೊಂಡ ಆ ದೇಸಿಗನನ್ನು, ಅವನ ತಾಯಿಯ ತಾಯಿ ಗೌರಜ್ಜಿ, ಗೊಲ್ಲಹಳ್ಳಿಗೆ ಕರೆದುಕೊಂಡು ಬಂದಳು. ಪ್ರೀತಿಯಿಂದ ಸಾಕಿ ಅವನನ್ನು ದೊಡ್ಡವನನ್ನಾಗಿ ಮಾಡಿದಳು. ಈ ಮೊಮ್ಮ-ಗನ ಹೊರತು ಮುದುಕಿಗೆ ಇನ್ನಾರೂ ಇರಲಿಲ್ಲ. ಹಳ್ಳಿಯಲ್ಲಿ ಸ್ವಂತದ ಮನೆಯಿದ್ದಿತು; ಎರಡು ಕೂರಿಗೆಯಷ್ಟು ಎರೆಯ ಹೊಲವಿದ್ದಿತು. ಮನೆಯಲ್ಲಿ ಎಮ್ಮೆ-ಆಕಳುಗಳನ್ನು ಸಾಕಿಕೊಂಡು ಮುದುಕಿ, ಹಾಲು-ಬೆಣ್ಣೆಗಳ ವ್ಯಾಪಾರ ವನ್ನೂ ಮಾಡುತ್ತಿದ್ದಳು. ತನ್ನೆಲ್ಲ ಬದುಕನ್ನು ಮೊಮ್ಮಗನ ಹೆಸರಿಗೆ ಮಾಡಿ ಅವನನ್ನು ಊರಲ್ಲೊಂದು ಒಕ್ಕಲನ್ನಾಗಿ ಮಾಡಬೇಕೆಂದು ಗೌರ-

ಜ್ಜಿಯ ಹಾರಯಿಕೆ.

ಮನೆಯಲ್ಲಿ ಮಾಡುವವರಾರೂ ಇರದುದರಿಂದ, ಗೌರಜ್ಜಿಯ ಹೊಲ-ವನ್ನು— ಮೊದಲಿನಿಂದಲೂ— ಆವಳ ದೂರದ ದಾಯಾದಿ ಶಿವರಾಯ ಪಾಲಿನಿಂದ ಮಾಡಿದ್ದ. ಗಂಗಣ್ಣ ಬಂದ ಮೇಲೂ ಅವನೇ ಮಾಡುತ್ತಲಿದ್ದ. ಮನೆಗೆ ಬಂದಂದು ಮೊದಲುಗೊಂಡು ಗಂಗಣ್ಣ, ಮನೆಯ ದನಗಳನ್ನು ಮೇಯಿಸಿಕೊಂಡು ಬರುವ ಕೆಲಸವನ್ನು ತಾನೆ ವಹಿಸಿಕೊಂಡಿದ್ದ. ಮೊದ-ಮೊದಲು ಗೌರಜ್ಜಿ ಜೊತೆಗೆ ಹೋಗುತ್ತಿದ್ದಳು; ರೂಢಿಯಾದಂತೆ ಗಂಗಣ್ಣ ಒಬ್ಬನೆ ಹೋಗತೊಡಗಿದ.

ಮುದುಕಿ ತನ್ನ ಪ್ರೀತಿಯ ಮೊಮ್ಮಗನಿಗೆ ಬಯಸಿದುದನ್ನು ಮಾಡಿ ಬುತ್ತಿ ಕಟ್ಟಿಕೊಡುತ್ತಿದ್ದಳು. ಗಂಗಣ್ಣ ವೇಳೆಗೆ ಸರಿಯಾಗಿ ದನಗಳನ್ನು ಕಾಡಿಗೆ ಅಟ್ಟಿಕೊಂಡು ಹೋಗಿ ಪ್ರೀತಿಯಿಂದ ಮೇಯಿಸುವ; ತಿಳಿನೀರ ತೊರೆಯಲ್ಲಿ ನೀರನ್ನು ಕುಡಿಸಿ ಮೀಯಿಸುವ; ಸಂಜೆಯ ಸೂರ್ಯ ಪಡುವಣ ಬಾನಿನಲ್ಲಿ ಚೆಂಡೂಳಿಯಾಟವಾಡುತ್ತಿರುವಾಗ, ದನಗಳನ್ನು ಅಟ್ಟಿಕೊಂಡು ಮನೆಯ ಕಡೆಗೆ ಬರುವ.

ಸಂಜೆಯ ಊಟ ಮುಗಿಸಿ, ಮುದುಕಿ ಮೊಮ್ಮಗ ಸೇರಿ ಮುಮ್ಮನೆ-ಯಲ್ಲಿ ಕೂಡುವರು. ಆಗ ಮುದುಕಿ ಪಾಂಡವರ ಕತೆ, ರಾಮನ ಕತೆ, ಹರಿಶ್ಚಂದ್ರ ರಾಯನ ಕತೆ, ಕುಮಾರರಾಮನ ಕತೆ, ಕರಿಬಂಟನ ಕತೆ— ಇವುಗಳಲ್ಲಿ ಯಾವುದಾದರೊಂದನ್ನು ರಸದುಂಬಿ ಹೇಳುವಳು. ಕೊನೆಗೆ ಕತೆಯಲ್ಲಿಯ ನೀತಿಯನ್ನೂ ವಿವರಿಸುವಳು. ಇನ್ನೊಂದೊಂದು ದಿನ, ಬದುಕಿನ ಅನುಭವದ ವಚನಗಳನ್ನೂ ಸರ್ವಜ್ಞನ ತುಣುಕುಪದ್ಯಗಳನ್ನೂ ತನ್ನ ಹಳ್ಳಿಯ ಮಾತಿನಲ್ಲಿ ಹೇಳಿ ಅರ್ಥ ವಿವರಿಸುವಳು. ಇದನ್ನೆಲ್ಲ ಕೇಳಿ ಕೇಳಿ ಗಂಗಣ್ಣ, ತನ್ನ ಎದೆಯ ಪಟದ ಮೇಲೆ ಏನೇನನ್ನೋ ಮೂಡಿಸಿ ಮೂಡಿಸಿ ಇರಿಸಿಕೊಳ್ಳುತ್ತಿದ್ದ.

ದನ ಕಾಯಲಿಕ್ಕೆ ಹೋದಾಗ ಗಂಗಣ್ಣ ಸುಮ್ಮಗಿರುತ್ತಿದ್ದನೇನು? ಮಧ್ಯಾಹ್ನ ನೀರು ಕಂಡಲ್ಲಿ ಈಜಾಡಿ ಸ್ನಾನ ಮಾಡುತ್ತಿದ್ದ. ಬಟ್ಟೆ-ಬರೆ ಹಸನಾಗಿ ಒಗೆದುಕೊಳ್ಳುತ್ತಿದ್ದ. ಗೆಳೆಯರೊಂದಿಗೆ ಕುಳಿತು— ಕೊಟ್ಟು, ಕೊಂಡು— ಊಟ ಮಾಡುತ್ತಿದ್ದ. ಬಿಸಿಲು ಇಳಿದು ತಂಪಾದಾಗ, ಕಾಡಿನ-

ಲ್ಲಿಯೆ ಕಣ ಪಣಿ ಗೆಳೆಯರೊಂದಿಗೆ ಕುಸ್ತಿಯಾಟ ಆಡುತ್ತಿದ್ದ. ಅಜ್ಜಿ ನೀಡುವ ಒಲಪಿನೂಟ, ಪ್ರಕೃತಿಯೊಂದಿಗೆ ಆಟಪಾಟ— ಇದರಿಂದ ಗಂಗಣ್ಣನ ಮೈ ಹುರಿಗೊಂಡು ಬೆಳೆಯುತ್ತಲಿತ್ತು.

* * * *

ಶಿವರಾಯನ ಎರಡನೆಯ ಮಗಳು ದೇವಮ್ಮ. ಎಳೆಯತನದಿಂದಲೂ ಅಜ್ಜಿಯ ಮನೆಯಲ್ಲಿ ಆಟವಾಡುತ್ತ ಬಳೆದ ಹುಡುಗಿ. ಗಂಗಣ್ಣ ದೇಸಿಗನಾಗಿ ಅಜ್ಜಿಯ ಮನೆಗೆ ಬಂದಾಗ, ಅವನಿಗೆ ಒಂಬತ್ತು-ಹತ್ತು ವರ್ಷದ ವಯಸ್ಸು; ಆಗ ದೇವಮ್ಮ ನಾಲ್ಕೈದು ವರ್ಷದ ಎಳಮಗು. ಜೀವಕ್ಕೊಂದು ಜೊತೆ ಬೇಕೆಂದು ಗೌರಜ್ಜಿ ಈ ಮಗುವನ್ನು ಹಚ್ಚಿಕೊಂಡಿದ್ದಳು. ಈಗ ಗಂಗಣ್ಣ ಬಂದ ಮೇಲೂ ಆ ಹಚ್ಚಿಕೊಂಡ ಸಂಬಂಧ ಬಿಡಲಿಲ್ಲ. ಆಗಾಗ ಮನೆಗೆ ಬಂದು ದೇವಮ್ಮ ತನ್ನ ಆಟ-ನೋಟಗಳನ್ನು ನಡೆಯಿಸುತ್ತಿದ್ದಳು.

ಆ ನಿಂಬೆಹಣ್ಣಿನ ಬಣ್ಣದ ಎರಳೆಗಣ್ಣಿನ ಬೆಡಗಿನ ಹುಡುಗಿಯನ್ನು ಕಂಡರೆ, ಮೊದಲಿನಿಂದಲೂ ಗಂಗಣ್ಣನಿಗೆ ಪ್ರೀತಿ. ಅವಳನ್ನು ಮುದ್ದಿಟ್ಟು ಎತ್ತಿಕೊಳ್ಳುವನು; ತನ್ನ ಎಮ್ಮೆ-ಆಕಳುಗಳನ್ನು ತೋರಿಸುವನು; ಒಮ್ಮೊಮ್ಮೆ ಜೊತೆಗೆ ಊಟಕ್ಕೆ ಕರೆದುಕೊಳ್ಳುವನು. ಕಾಡಿನಿಂದ ತಂದ ಬೋರೆಯ ಹಣ್ಣು, ಕಾರೆಯ ಹಣ್ಣುಗಳನ್ನೂ ಚಂಡುಹೂ-ದಂಡೆಹೂಗಳನ್ನೂ ಅವಳಿಗೆ ಮೆಚ್ಚು ಕೊಡುವನು. ಇವರಿಬ್ಬರ ಪ್ರೀತಿಯನ್ನು ಕಂಡಾಗ, ಮುದುಕಿ ಸುಮ್ಮನ ಕುಳತು ಮನದಲ್ಲಿ ಏನೇನನ್ನೋ ಭಾವಿಸುತ್ತಿದ್ದಳು. ಒಮ್ಮೊಮ್ಮೆ ನಿಡಿದಾಗಿ ಉಸಿರುಹಾಕುತ್ತಿದ್ದಳು; ಮತ್ತೊಮ್ಮೆ ಸಮಾಧಾನದ ಮೆಲುನಗೆ ನಗುತ್ತಿದ್ದಳು.

ಕಾಲದ ಮಹಾಪ್ರವಾಹದಲ್ಲಿ ಮನುಷ್ಯವ್ಯಕ್ತಿಗಳ ಬಾಲ್ಯ ಕಳೆದು ತಾರುಣ್ಯ ಬರುವುದೆಂಬರೆ ಅದೆಷ್ಟು ಹೊತ್ತಿನ ಕೆಲಸ ? ನಿತ್ಯದ ಸೂರ್ಯ, ನಿತ್ಯದ ಚಂದ್ರ, ನಿತ್ಯದ ಹಗಲು, ನಿತ್ಯದ ಇರುಳು, ನಿತ್ಯದ ಕೂಳು, ನಿತ್ಯದ ನೀರು ! ಆದರೂ ಯಾರಿಗೂ ತಿಳಿಯದಂತೆಯೆ ಮಾನವನ ದೇಹ-ಮನಸ್ಸುಗಳು ಹೇಗೊ ಹೇಗೋ ಬೆಳೆಯುತ್ತವೆ— ಎಳೆಯತನ ಕಳೆದು ಬೆಳೆಯತನ ಬರುತ್ತದೆ. ಗೆಳೆತನವನ್ನು ಬಟ್ಟು ಅದು ಕೆಳೆತನವನ್ನು

ಹಾರಯಿಸತೊಡಗುತ್ತದೆ.

ಗಂಗಣ್ಣನಿಗೆ ಇಪ್ಪತ್ತು ವರ್ಷಗಳು ತುಂಬಿದುವು ದೇವಕ್ಕನಿಗಾಗ ಹದಿನೈದು ತುಂಬಿ ಹದಿನಾರು ನಡೆದಿತ್ತು. ಈ ಅವಧಿಯಲ್ಲಿ ದೇವಕ್ಕನನ್ನು ಬೇಡಲು ಎಲ್ಲೆಲ್ಲಿಂದಲೋ ಯಾರುಯಾರೋ ಬಂದುಹೋದರು; ಆದರೆ ಏನೇನೋ ಅಡೆತಡೆಗಳು ಒದಗಿ, ಒಂದು ಕಡೆಗೂ ಸಂಬಂಧ ಕೂಡಿ-ಬರಲಿಲ್ಲ. ಬೇಡಲಿಕ್ಕೆಂದು ಮನೆಗೆ ಯಾರಾದರೂ ಬಂದ ದಿನ, ದೇವಕ್ಕನಿಗೆ ಉತ್ಸಾಹವೇ ಇರುತ್ತಿರಲಿಲ್ಲ ಅಂದು ಗೌರಜ್ಜಿಯ ಮನೆಯ ಕಡೆಗೂ ಆಕೆ ಹೋಗುತ್ತಿರಲಿಲ್ಲ. ಗಂಗಣ್ಣನಿಗೆ ಆ ದಿನವೆಲ್ಲ ಮುಳ್ಳು ಚುಚ್ಚಿದಂತೆ ಆಗು-ತ್ತಿತ್ತು. ಸಂಬಂಧ ಕೂಡಿಬರಲಿಲ್ಲವೆಂಬ ವರ್ತಮಾನ ತಿಳಿದಾಗ, ದೇವಕ್ಕನ ಮುಖ ಹಿಗ್ಗಿ ಇಷ್ಟಗಲವಾಗುತ್ತಿತ್ತು. ದೇವಕ್ಕ ಓಡಿಬಂದು ಗೌರಜ್ಜಿಯ ಮುಂದೆ ಆ ವಿಷಯ ಹೇಳುವಳು. ಅಜ್ಜಿ ನಿರಾಶೆಯಲ್ಲಿ ಆಶೆಯ ಬೆಳಕನ್ನು ಕಂಡಂತೆ ಸಮಾಧಾನದ ನಗೆ ನಗುವಳು ಗಂಗಣ್ಣ ಮಾತನೇನೂ ಆಡುತ್ತಿರ-ಲಿಲ್ಲವಾದರೂ, ಉರಿಯುವ ನೋವು ತಣ್ಣಗಾದಂತೆ ತಣಿವನ್ನು ಅನುಭವಿ-ಸುತ್ತಿದ್ದ.

ಆಗಾಗ ದೇವಕ್ಕ ತನ್ನ ಕಣ್ಣುಗಳಿಂದ, ಗಂಗಣ್ಣನ ಮೊಗಮೀಸೆ ಮೂಡಿದ ತುಂಬುಮೊಗವನ್ನೂ, ಅಗಲವಾದ ಕೆಚ್ಚೆದೆಯನ್ನೂ, ಹುರಿ-ಕಟ್ಟಿದ ತೋಳುಗಳನ್ನೂ ನೋಡುವಳು. ಗಂಗಣ್ಣ ಕದ್ದು ಕದ್ದು ದೇವಕ್ಕನ ಮುಂಗುರುಳ ಸುಳಿಗಳನ್ನೂ, ಕೆಣಕುನಗೆ ಕುಣಿವ ಕೆಳದುಟಿಯನ್ನೂ, ತಾರುಣ್ಯ ಗುಡಿಗಟ್ಟಿದಂತಿರುವ ಉಬ್ಬಿದ ಎದೆಯನ್ನೂ ನೋಡುವನು. ನೋಡಿ ನೋಡಿ ಇಬ್ಬರೂ ಒಳಗೊಳಗೇ ಬಿಸಿಯುಸಿರನ್ನು ಹಾಕುವರು. ಅನುಭವಿಕಳಾದ ಗೌರಜ್ಜಿಗೆ ಇವರ ಕಣ್ಣುಮುಚ್ಚಾಲೆ ಗೊತ್ತಾಗದೆ ಇರುವುದೆ? ಈ ಕಳ್ಳಾಟ ಗೊತ್ತಾದ ಮೇಲೆ ಅವಳಿಗೆ ಸುಮ್ಮಗಿದ್ದು ಬಿಡಲಿಕ್ಕೆ ಆಗು-ವುದೆ ?

ದೇವಮ್ಮನನ್ನು ಗಂಗಣ್ಣನಿಗೆ ಕೊಡುವಂತೆ ಗೌರಜ್ಜಿ, ಶಿವರಾಯ-ನನ್ನೂ ಅವನ ಹೆಂಡತಿ ಗಿರಿಜವ್ವನನ್ನೂ ಕೇಳಿದಳು. ಮುದುಕಿಯ ಮನೆ, ಹೊಲ. ಮಾಡಿಟ್ಟ ಗಂಟು ಇವೆಲ್ಲವನ್ನೂ ಚೆನ್ನಾಗಿ ಅರಿತಿದ್ದ ಆ ಗಂಡ-ಹೆಂಡಿರು, ವಿಚಾರಮಾಡಿದವರಂತೆ ನಟಿಸಿ, ಆಗಬಹುದೆಂದು ಒಪ್ಪಿಗೆ

ಕೊಟ್ಟರು. ಈ ವಾರ್ತೆ ತಿಳಿದ ದಿನ ದೇವಕ್ಕನಿಗೆ ಜಗತ್ತೆಲ್ಲ ಆನಂದದಿಂದ ಕುಣಿಯುತ್ತಿರುವಂತೆ ಕಂಡಿತು. ಗಂಗಣ್ಣನಿಗೆ ದನಗಳನ್ನು ಮೇಯಿಸಲಿಕ್ಕೆ ಬಿಡಬೇಕೆಂಬ ಎಚ್ಚರವೂ ಇರಲಿಲ್ಲ.

ಬೇಸಗೆಯಲ್ಲಿ ಮದುವೆ ಮಾಡಬೇಕೆಂಬುದು ಗೊತ್ತಾಯಿತು. ಒಳ್ಳೆಯ ದಿನ ನೋಡಿ, ಸಂಪ್ರದಾಯದಂತೆ 'ಭಷ್ಟಿಗೆ'ಯ ಕಾರ್ಯ ತೀರಿಸಬೇಕೆಂದೂ ಮಾತನಾಡಿದರು. ಗಂಗಣ್ಣ–ದೇವಕ್ಕ ಇವರ ಸಂಸಾರವನ್ನು ಕಣ್ಣಾರೆ ಕಾಣುವೆ ನೆಂದು ಗೌರಜ್ಜಿ ಹಿರಿಹಿರಿ ಹಿಗ್ಗುತ್ತಿದ್ದಳು. ಆ ಒಳ್ಳೆಯ ದಿನದ ಹಾರಯಿಕೆ ಯಲ್ಲಿ, ಬಂದ ದಿನಗಳನ್ನು ಒಂದೊಂದಾಗಿ ನೂಕುತ್ತಿದ್ದಳು.

ಇದ್ದುದಿದ್ದ ಹಾಗೆಯೆ ಗೌರಜ್ಜಿ ಜ್ವರಬಂದು ಮಲಗಿದಳು. ಹಳ್ಳಿಯ ವೈದ್ಯರಾಜ ಕಟ್ಟಿನ ಜ್ವರವೆಂದು ಹೆಸರಿಟ್ಟ. ಕಷಾಯ–ಗುಳಿಗೆ ಪುಡಿಗಳನ್ನು ಕೊಡಲು ತೊಡಗಿದ. ಯಾವುದಕ್ಕೂ ಜ್ವರವು ಸರಿಯಲಿಲ್ಲ. ಸನ್ನಿಪಾತ ವಾಗಿ ಮುದುಕಿ ಬಡಬಡಿಸಲು ತೊಡಗಿದಳು. ಜನರೆಲ್ಲ ಗಾಳಿಯಾಗಿದೆ–ಯೆಂದರು. ಮಂತ್ರವಾದಿಗಳು ಬಂದು ದೆವ್ವಬಿಡಿಸುವ ತಂತ್ರಗಳನ್ನು ನಡೆಯಿ-ಸಿದರು. ಈ ತಂತ್ರಗಳ ಕೊನೆಯೊಂದಿಗೆ ಮುದುಕಿಯ ಜೀವಯಂತ್ರ ನಿಂತು ಹೋಯಿತು ಗಂಗಣ್ಣ ತುಂಬ ಅತ್ತ. ಮರಣೋತ್ತರ ಕಾರ್ಯಗಳೆಲ್ಲ ಒಂದೊಂದಾಗಿ ನಡೆದುವು.

ಮುದುಕಿಯ ಅಗಲಿಕೆ ಗಂಗಣ್ಣನಿಗೆ ಭೂತಕಾಲದ್ದಾಗುತ್ತ ಬಂದಿತು. ಭವಿಷ್ಯತ್ಕಾಲದ ದೇವಕ್ಕನ ಸಹವಾಸಸುಖದ ಸ್ಮರಣೆ, ಈ ಭೂತಕಾಲದ ದುಃಖದ ಮೇಲೆ ತೆರೆಯನ್ನು ಹಾಕಲಾರಂಭಿಸಿತು. ಮನೆಯ ಎಲ್ಲ ಹೊರೆ ತನ್ನ ಮೇಲೆ ಬಿದ್ದ ಚಿಂತೆಯನ್ನೂ, ಅವನ ಭವಿಷ್ಯತ್ ಸುಖದ ಆಶೆ ಕಡಮೆ ಮಾಡುತ್ತಿತ್ತು.

*　　　*　　　*　　　*

ಶಿವರಾಯನ ಹೊಲದ ಸೀಮೆಯ ವಿಷಯದಲ್ಲಿ, ಅವನಿಗೂ ನೆರೆಯ ಹೊಲದ ಭೀಮಪ್ಪನಿಗೂ ಬಹುದಿನಗಳಿಂದ ಜಗಳ ನಡೆದಿದ್ದಿತು. ಊರ ಗೌಡ-ಕುಲಕರ್ಣಿಯವರು ಇಬ್ಬರ ಕಡೆಯಿಂದಲೂ ಲಂಚತಿಂದು, ಈ ಸೀಮೆಯ ಸಮಸ್ಯೆಯನ್ನು ಇನ್ನಿಷ್ಟು ಹೆಚ್ಚಿಸಿದರು. ಶಿವರಾಯನನ್ನು ಕಂಡಾಗ ಅವರು 'ನಿನ್ನದೇ ಸರಿ! ಹೆದರಬೇಡ!' ಎಂದು ಹೇಳುತ್ತಿದ್ದರು.

ಭೀಮಪ್ಪ ಛೆಟ್ಟಿಯಾದಾಗ 'ನೀನು ಹಿಂಜರಿಯಬೇಡ, ನಾವಿದ್ದೇವೆ' ಎಂದು ಬೋಧಿಸುತ್ತಿದ್ದರು.

ಒಂದು ದಿನ ಭೀಮಣ್ಣ, ತನ್ನ ಹೊಲದ ಸೀಮೆಗುಂಟ ಇದ್ದ ನಟ್ಟನ್ನು ಆಗಿಯುತ್ತ ನಿಂತಿದ್ದ. ಶಿವರಾಯನ ಹಿರಿಯ ಮಗ ವೀರಣ್ಣ— ಇದ್ದುದಿದ್ದ ಹಾಗೆಯೆ—ದೊಣ್ಣೆಯೊಂದನ್ನು ಹಿಡಿದುಕೊಂಡು ಬಂದ....ಬಗ್ಗಿ ನಟ್ಟು ಕಡಿಯುತ್ತಲಿದ್ದ ಭೀಮಣ್ಣನ ತಲೆಯ ಮೇಲೆ, ಒಮ್ಮೆಲೆ ದೊಣ್ಣೆಯನ್ನೆತ್ತಿ ಹಾಕಿದ. ಬಳಿಯ ಹೊಲದಲ್ಲಿ ಇದ್ದ ಗಂಗಪ್ಪ ಇದನ್ನು ನೋಡಿ, ಅವಸರಪಟ್ಟು ಓಡಿಬರುವುದರಲ್ಲಿಯೆ ವೀರಪ್ಪ ಇನ್ನೂ ಮೂರು ನಾಲ್ಕು ಏಟುಗಳನ್ನು ಹೊಡೆದಿದ್ದ. ಭೀಮಣ್ಣ ನಿಂತಲ್ಲಿಯೆ ಮೈಮರೆದು ಬಿದ್ದುಬಿಟ್ಟಿದ್ದ. ಗಂಗಣ್ಣ ಓಡಿಬಂದು ನೋಡಿದಾಗ, ಭೀಮಣ್ಣನ ತಲೆಯೊಡೆದು ಮೂಗು-ಬಾಯಿ-ಕಣ್ಣುಗಳೆಲ್ಲ ರಕ್ತದಿಂದ ತುಂಬಿಹೋಗಿದ್ದುವು. ಮೈಮೇಲೆ ಎಚ್ಚರವೇ ಇರಲಿಲ್ಲ. ವೀರಣ್ಣನ ಕೈಯೊಳಗಿನ ದೊಣ್ಣೆಯನ್ನು ಕಸಿದುಕೊಂಡು ಗಂಗಪ್ಪ, ಅವನನ್ನು ಹಿಂದಕ್ಕೆ ನೂಕಿದ ಬಳಿಕ ಭೀಮಣ್ಣನ ಬಳಿಯಲ್ಲಿ ಕುಳಿತು, ಹೊತ್ತ ವಲ್ಲಿಯಿಂದಲೇ ನೆತ್ತರನ್ನು ಒರಸುತ್ತ ಉಪಚರಿಸಲು ತೊಡಗಿದ. ಅಪರಾಧಿಮನದ ವೀರಣ್ಣ, ಅಲ್ಲಿ ನಿಲ್ಲದೆ ಎಲ್ಲಿಗೋ ಹೋಗಿಬಿಟ್ಟ.

ಹೇಗೆ ಸುದ್ದಿ ಹತ್ತಿತೇನೋ! ಭೀಮಣ್ಣನ ಮನೆಯವರು ಅಳುತ್ತ ಬಾಯಿ ಬಾಯಿ ಬಡಿದುಕೊಳ್ಳುತ್ತ ಅಲ್ಲಿಗೆ ಬಂದರು ಗಂಗಣ್ಣ ನಡೆದ ಸಂಗತಿಯನ್ನು ಅವರೆದುರು ವಿವರಿಸಿ, ಭೀಮಣ್ಣನನ್ನು ಅವರ ಕಡೆಗೆ ಒಪ್ಪಿಸಿ ಇದೀಗಲೇ ಹೋಗಿ ನೀರು ತರುವೆನೆಂದು ಓಡಿದ. ನೆರೆಯ ಹೊಲದಲ್ಲಿ ಕೇಳಿ ತಂಬಿಗೆಯೊಂದನ್ನು ದೊರಕಿಸಿ, ದೂರದ ಹಳ್ಳದಿಂದ ನೀರನ್ನು ತುಂಬಿಕೊಂಡು ಬರುವುದರಲ್ಲಿಯೆ, ಊರೊಳಗಿಂದ ಗೌಡರು, ಶಾನಭೋಗರು, ಓಲೆಕಾರರು ಬಂದುಬಿಟ್ಟಿದ್ದರು. ಗಂಗಣ್ಣ ಬಂದುದನ್ನು ನೋಡಿದೊಡನೆಯೆ, ಗೌಡರು ಅವನನ್ನು ತಮ್ಮ ಬಳಿ ಕರೆದು, ಏನೇನಾಯಿತೆಂಬುದನ್ನು ಕೇಳಿದರು. ತಾನು ಕಂಡದ್ದನ್ನೆಲ್ಲ ಗಂಗಣ್ಣ ಗೌಡರ ಮುಂದೆಯೂ ಹೇಳಿದ. ಪದ್ಧತಿಯಂತೆ ಪಂಚನಾಮೆಯ ಕೆಲಸ ಮುಗಿಯಿತು. ಬಳಿಕ ಗೌಡರು ಗಂಗಣ್ಣನಿಂದ ಅಧಿಕೃತ ಜವಾಬನ್ನು ತೆಗೆದುಕೊಂಡು, ಅದರ ಮೇಲೆ ಅವನ ಒಪ್ಪಿಗೆಯ ಬೆರಳನ್ನು ಊರಿಸಿಕೊಂಡರು.

ಶೈತ್ಯೋಪಚಾರದಿಂದ ಭೀಮಣ್ಣ ಚೇತರಿಸಿಕೊಂಡ. ಪ್ರಾಣವೇನೂ ಹೋಗಿರಲಿಲ್ಲ; ಆದರೆ ತಲೆಗೆ ಬಿದ್ದ ಏಟುಗಳು ಬಲವಾಗಿದ್ದುವು. ಸರಕಾರದ ರೀತಿಗನುಸಾರವಾಗಿ ಅವನನ್ನು ಬಂಡಿಯಲ್ಲಿ ಹಾಕಿ, ಸರಕಾರೀ ದವಾಖಾನೆಗೆ ಕಳುಹಿದರು.

* * * "

ಅಂದೆಯೆ ನಾಲ್ಕು ತಾಸು ರಾತ್ರಿಯಾಗಿರಬಹುದು. ಭೀಮಣ್ಣನ ಪ್ರಕರಣವನ್ನು ಕಣ್ಣಾರೆ ಕಂಡುಬಂದ ಗಂಗಣ್ಣನಿಗೆ ಊಟದಲ್ಲಿ ಆಶೆಯೆ ಇರಲಿಲ್ಲ. ಹಾಗೆಯೆ ಮನೆಯಲ್ಲಿ ಹಾಸಿದ ಕಂಬಳಿಯ ಮೇಲೆ ಬಿದ್ದುಕೊಂಡು ಯಾವು-ಯಾವುವೊ ಯೋಚನೆಗಳನ್ನು ಮೆಲುಕುಹಾಕುತ್ತಲಿದ್ದ. ಇದ್ದುದಿದ್ದ ಹಾಗೆಯೆ ಗಂಗಣ್ಣನಿಗೆ ಬಾಗಿಲನ್ನು ತಟ್ಟಿದ ಸಪ್ಪಳ ಕೇಳಿಸಿತು. ಎದ್ದು ಬಂದು ಬಾಗಿ-ಲನ್ನು ತೆರೆದು ನೋಡಿದ. ಶಿವರಾಯಪ್ಪ, ಗೌಡರು ಬಂದು ನಿಂತಿದ್ದರು. ಕರೆಯುವ ದಾರಿಯನ್ನು ಕೂಡ ನೋಡದೆ, ಅವರು ಮನೆಯೊಳಗೆ ಬಂದರು. ತಲೆಬಾಗಿಲನ್ನು ಹಾಕಿಕೊಂಡು ಬಾರೆಂದು ಗಂಗಣ್ಣನಿಗೆ ಹೇಳಿ, ನಡುಮನೆಗೆ ಬಂದು, ಹಾಸಿದ್ದ ಕಂಬಳಿಯ ಮೇಲೆ ಕುಳಿತುಕೊಂಡರು ಗಂಗಣ್ಣನಿಗೆ ಆಶ್ಚರ್ಯ. ಪ್ರಶ್ನಾತುರ ದೃಷ್ಟಿಯಿಂದ ಅವನು ಗೌಡರ ಕಡೆಗೊಮ್ಮೆ, ಶಿವ-ರಾಯನ ಕಡೆಗೊಮ್ಮೆ ನೋಡುತ್ತ ನಿಂತುಕೊಂಡ; 'ಕೂತುಕೋ ಗಂಗಪ್ಪಾ' ಎಂದು ಗೌಡರು ಹೇಳಿದ ಮೇಲೆ ಹತ್ತಿರದ ನೆಲದ ಮೇಲೆ ಕುಳಿತುಕೊಂಡ. ಆಗ ಗೌಡರು ಮುಗುಳುನಗೆ ನಗುತ್ತ ಸಲುಗೆಯ ಧ್ವನಿಯಲ್ಲಿ ಕೇಳಿದರು :

"ಏನಪಾ ಗಂಗಪ್ಪಾ, ಇಂದ ನೀ ಹೀಂಗ್ಯಾಕ ಮಾಡಿದಿ ?"

ಗಾಬರಿಯಾಗಿ ಗಂಗಣ್ಣ ಕೇಳಿದ:

"ನಾ ಏನ ಮಾಡೀನಿ ಗೌಡರ ?"

"ನಾ ಏನ ಮಾಡೀನಿ— ಅಂದರ ಏನಲೆ ? ಶಿವರಾಯ— ವೀರಣ್ಣ ನಿನಗ ಹೊರಗಿನವರ ? ನೀ ಇಂದ ಅವರ ವಿರುದ್ಧ ಸಾಕ್ಷೀ ಹೇಳೀದಿ ಅಲ್ಲಾ !"

"ವಿರುದ್ಧ ಸಾಕ್ಷೀ-ಪಾಕ್ಷೀ ನನಗೇನೂ ಗೊತ್ತಿಲ್ರಿ ! ಅಲ್ಲಿ ನಾ ಏನೇನು ನೋಡಿದ್ದೆ, ಅದನ್ನ ಮಾತ್ರ ಹೇಳಿದೇನ್ರಿ !"

ಗೌಡರು ಶಿಕ್ಷಕನ ಧ್ವನಿಯಲ್ಲಿ ಹೇಳಿದರು:

" ನೀ ಎಲ್ಲಾ ನೋಡಿದ್ದು ಹೇಳೀದಿ ಖರೇ ! ಇದರಿಂದ ನಿಮ್ಮ ಮಾವನ ಮಗ್ಗ ಶಿಕ್ಷಾ ಆಗತದಲ್ಲಾ !"

ಸಹಜಸ್ವರದಲ್ಲಿ ಗಂಗಣ್ಣ ನುಡಿದ :

" ತಪ್ಪು ಮಾಡಿದ ಮ್ಯಾಗ ಆಗೋ ಸಿಕ್ಸಾ ಅನುಭೋಗಸಲಾಕs ಬೇಕಲ್ರಿ ! ಹುತ್ತಿನಾಗ ಕೈ ಹಾಕಿದ ಮ್ಯಾಗ ಹಾವು ಕಡಿಯೂದು ಬಿಡತೈತೇನ್ರಿ ! "

ಗೌಡರು ಸ್ವಲ್ಪ ತಡೆದು ಮತ್ತೆ ಹೇಳಿದರು :

" ನೋಡೋ, ವಿಚಾರ ಮಾಡು ! ಇವರೇನು ನಿನಗ ಹೊರಗಿನವರಲ್ಲ ! ನಾಳೆ ಇವರ ಮನೀ ಹೆಣ್ಣು ಮಾಡಿಕೊಳ್ಳಾಂವ ಇದ್ದೀ ನೀನು ! "

" ಹೆಣ್ಣು ಮಾಡಿಕೊಳ್ಳೂದಕ ನನ್ನ ಖರೇ ಮಾತು ಅಡ್ಡ ಯಾಕ ಬರಬೇಕು ಗೌಡರ ? ಅದಕ್ಕs ಇದಕ್ಕs ಏನು ಸಮ್ಮಂದ ? ಇಷ್ಟಕ್ಕಾಗಿ ನನಗ ಸುಳ್ಳು ಮಾತಾಡೂ ಅಂತ ಹೇಳತೀರೇನು ? "

" ಪ್ರಸಂಗ ಬಂದಾಗ ಮನಶಾ ಸುಳ್ಳು ಹೇಳ್ಳಾಕs ಬೇಕಾಗತೈತಿ; ಏನಪಾ ? "

" ಹೆಂತಾ ಪರಸಂಗ ಬಂದರೂ ಸುಳ್ಳು ಮಾತ್ರ ಮಾತಾಡಬ್ಯಾಡಾ–ಅಂತ, ನಮ್ಮ ಮುದಿಕಿ ನನ್ನ ಕಡಿಂದ ಮಾತು ತಕ್ಕೊಂಡಾಳ್ರಿ ! "

ಗೌಡರು ತುಸು ರೊಚ್ಚಿನ ಧ್ವನಿಯಲ್ಲಿ ಹೇಳಿದರು :

" ಹೋಗೋ ಹುಚ್ಚಾ ! ಮುದುಕಿ ಏನು—ಮಾತು ತೊಗೋ-ತೈತಿ ಏನು ! ನೀ ಈಗ ನಾ ಹೇಳಿದ್ಹಾಂಗ ಕೇಳು ? ಈ ಕಲಿಯುಗದೊಳಗ ಬರೇ ಖರೇ ಇದ್ದರ ನಡಿಯೂದಿಲ್ಲ....ತಿಳೀತೇನು ? ನೀನು ಇಂದು ಕೊಟ್ಟ ಜವಾಬಿನ ಕಾಗದ, ಇನ್ನೂ ನನ್ನ ಹತೀಲೇನs ಐತಿ. ಶಿವರಾಯ ನನಗ ಬೇಕಾದ ಮನಶಾ ! ಅಂವಗ ಕೆಟ್ಟ ಆಗೂದು ಅಂದರ, ನನಗ ಕೆಟ್ಟ ಅದ್ಹಾಂಗs ! ಆದಕ್ಕs ಈಗ ನಾನು ಮುದ್ದಾಂ ನಿನ್ನ ಮನೀಗೆ ಬಂದೀ-ನೇನಪಾ ! ನಿನ್ನ ಜವಾಬಿನ ಕಾಗದಾ ಇಲ್ಲೇ ಹರದು ಹಾಕಿ, ಬ್ಯಾರೇ ಜವಾಬು ಬರಕೊಂಡು ಕಳಿಸಬೇಕಂತ ನನ್ನ ಮನಸು ! ಈಗ ನಾ ಹೇಳಿದ್ಹಾಂಗ ಜವಾಬು ಕೊಡು ! "

ನಿಶ್ಚಯಧ್ವನಿಯಲ್ಲಿ ಗಂಗಣ್ಣ ಹೇಳಿದ :

"ಚೇಚೇಚೇ ! ನಾ ಎಂದೂ ಸುಳ್ಳು ಹೇಳಾಕಿಲ್ಲ. ಯಾರು ಎಲ್ಲೇ ಕೇಳಿದರೂ ಕಂಡಷ್ಟು ಮಾತನ್ನ ನಾನು ಖರೇ ಹೇಳಿಬಿಡಾಂವ್ರ !"

ಶಿವರಾಯ ಬುದ್ಧಿಯ ಮಾತು ಹೇಳತೊಡಗಿದ :

"ನೋಡೋ ಹುಡುಗಾ ! ಇದು ರೀತಿ ಅಲ್ಲ ಇದು ! ಇದರಿಂದ ನಿನ್ನ ಪರಿಣಾಮ ಏನೂ ಪಾಡ ಆಗೋದಿಲ್ಲ ! ಮುದುಕಿ ಸತ್ತುಹೋತ್ಯು ! ಆಕೀ ಹೊಲಾ, ಮನಿ, ಬದುಕು ಇವೆಲ್ಲಾ ಇನ್ನೂ ನಿನ್ನ ಹೆಸರಿಗೆ ಆಗಿಲ್ಲ. ಗೌರಜ್ಜಿಗೆ....ಬ್ಯಾರೇ ಸಮೀಪದ ವಾರಸದಾರರು ಇದ್ದಾರ; ಗೊತ್ತೈತೇನು ? ನೀ ಈಗ ಗೌಡರು ಹೇಳಿದ್ಹಾಂಗ ಕೇಳದಿದ್ದರ, ನಿನ್ನ ಮನಿ–ಮಾರು ಬದುಕು–ಬಾಳೇ ಎಲ್ಲಾ ಕೈಬಿಡತಾವ ನೋಡು !"

ಗಂಗಣ್ಣ ಜಡವಾದ ದನಿಯಿಂದ ಮೆಲ್ಲಗೆ ಹೇಳಿದ :

"ನಮ್ಮ ಮುದಿಕಿ ಹೇಳತಿತ್ತು : 'ಸುಳ್ಳು ಹೇಳಲಿಕ್ಕೆ ತಯಾರಾಗಿದ್ದರ, ಆ ಮಾರಾಯ ಹರಿಶ್ಚಂದ್ರರಾಜಗ ವನವಾಸ ಅನಬೋಗಸೂ ಪರಸಂಗನು ಬರತಿದ್ದಿಲ್ಲಾ' ಅಂತ ! ಖರೇಕಾಗಿ ಆ ಮಾರಾಯ ದೊಡ್ಡದೊಂದು ರಾಜ್ಯಾನು ಬಿಟ್ಟನಂತ ! ನಂದೊಂದು ಚೋಟು ಮನೀ, ಗೇಣು ಹೊಲಾ ಹೋದರ, ನಾಯಾಕ ಚಿಂತೀ ಮಾಡಬೇಕು ? ದುಡಕೊಂಡು ತಿನ್ನಂವಗ ಎಲ್ಲಿಗೆ ಹೋದರೂ ಹೊಟ್ಟೆ ತುಂಬೇ ತುಂಬತೈತಿ !"

ನಿರಾಶೆಯ ಧ್ವನಿಯಲ್ಲಿ ಶಿವರಾಯ ತಟ್ಟನೆ ಹೇಳಿದ :

"ಆ ಮ್ಯಾಗ....ದೇವಕ್ಕನೂ ನಿನಗ ಸಿಗೂದಿಲ್ಲ ನೋಡು !"

ಗಂಗಣ್ಣನ ಹೃದಯದ ಮೇಲೆ ಒಮ್ಮೆಲೆ ಆಘಾತವಾದಂತೆ ಆಯಿತು. ಬೆಚ್ಚಿಬಿದ್ದು ಶಿವರಾಯನ ಮುಖದ ಕಡೆಗೆ ನೋಡಲಾರಂಭಿಸಿದ. ಆಗ ಗೌಡರು ಕೇಳಿದರು :

"ಹೌದು, ದೇವಕ್ಕನರೇ ಹ್ಯಾಂಗ ಸಿಗತಾಳ ?"

ಸ್ವಲ್ಪ ಕಾಲ ಸುಮ್ಮಗೆ ಕುಳಿತಿದ್ದು, ಬಳಿಕ ಮೆಲ್ಲಗೆ ಗಂಗಣ್ಣ ನುಡಿದ :

"ನನಗ ನಾಳಿನ ತನಕಾ, ಸೊಲ್ಪ ಯಿಚಾರಾ ಮಾಡಲಾಕ ಯಾಳೇ ಕೊಡ್ರಿ!"

ಗೆಲುವಿನ ಧ್ವನಿಯಲ್ಲಿ ಗೌಡರು ಹೇಳಿದರು :

"ಆಗಲಿ ನಡಿ ಶಿವಪ್ಪಾ, ಏನೋ ಎಳೀಗೆ ಬರೂಹಾಂಗ ಕಾಣತೈತಿ.... ನೀ ಏನೂ ಚಿಂತೀ ಮಾಡಬ್ಯಾಡ!"

ಇಬ್ಬರೂ ಎದ್ದು ಹೊರಟರು. ಅವರನ್ನು ಹೊರತನಕ ಕಳುಹಿ, ಬಾಗಿಲನ್ನು ಇಕ್ಕಿಕೊಂಡು ಗಂಗಣ್ಣ, ಒಳಗೆ ಬಂದು ಮತ್ತೆ ಬಿದ್ದುಕೊಂಡ. ಒಂದರ ಹಿಂದೊಂದು ವಿಚಾರಗಳು-ಎಚ್ಚರುಗನಸುಗಳು. ಒಮ್ಮೆ ದೇವಕ್ಕನ ಮೂರ್ತಿ ಬಂದು ನಿಲ್ಲುವುದು: 'ನಾನು ನಿನಗೆ ಬೇಡವೆ? ಬೇಕಾಗಿದ್ದರೆ ಗೌಡರು ಹೇಳಿದಂತೆ ಕೇಳು' ಎನ್ನುವುದು. ಇನ್ನೊಂದು ಸಲ ಮುದುಕಿಯ ಮೂರ್ತಿ ಕಂಡು, ತನ್ನ ಎಂದಿನ ಪ್ರೀತಿತುಂಬಿದ ಮಾತಿನಲ್ಲಿ 'ಎಂಥಾ ಪರ-ಸಂಗನೂ ಬರಲಿ; ಸುಳ್ಳು ಮಾತನಾಡಿದ ಮ್ಯಾಗ ಮನಶ್ಯಾನ ಕಿಮ್ಮತ್ತು ಉಳೀತೇನು?' ಎಂದು ಉಪದೇಶಿಸುವುದು. ಈ ವಿಚಾರದ ಉಯ್ಯಾಲೆಯಾಟದೊಂದಿಗೆ ಮಗ್ಗಲುಗಳನ್ನು ಬದಲಿಸುತ್ತ, ಇರುಳನ್ನು ನೂಕುತ್ತಲಿದ್ದ ಗಂಗಣ್ಣ.

ಮೊದಲನೆಯ ಕೋಳಿ ಕೂಗಿತು. ಗಂಗಣ್ಣ ಯಾವುದೋ ಒಂದು ಮಾತಿನ ನಿಶ್ಚಯ ಮಾಡಿದ ಭಾವದವನಾಗಿ ಮೆಲ್ಲಗೆ ಎದ್ದುನಿಂತ; ಕಂಬಳಿ-ಯೊಂದನ್ನು ಹೆಗಲ ಮೇಲೆ ತೆಗೆದುಕೊಂಡ. ದನದ ಹಕ್ಕೆಗೆ ಬಂದು ಒಂದೊಂ-ದಾಗಿ ದನಗಳ ಮೇಲೆ ಕೈಯಾಡಿಸಿ ನಮಸ್ಕಾರ ಮಾಡಿದ. ಎಲ್ಲವನ್ನೂ ನಿಂತು ನಿಂತು ನೋಡಿ ನಿಟ್ಟುಸಿರನ್ನು ಚೆಲ್ಲಿದ:

"ಇನ್ನಾ್ಯಕ ಇದೆಲ್ಲಾ ಸೆಳೆತ? ಇನ್ನಮ್ಯಾಗ ಇದೊಂದೂ ನನ್ನದಲ್ಲ!"

ಎಂದು ನುಡಿದು, ಜಡವಾದ ಹೆಜ್ಜೆಗಳನ್ನು ಹಾಕುತ್ತ ಮನೆಯಿಂದ ಹೊರಬಿದ್ದ. ಹೊರಟವನು ಹಿಂದಿರುಗಿ ಕೂಡ ನೋಡದೆ ಮುಂದೆ ಸಾಗಿದ.

ಮನೆಬಿಟ್ಟ ಗಂಗಣ್ಣ ಎರಡು ದಿನಗಳ ದಾರಿ ನಡೆದು, ತನ್ನನ್ನು ಯಾರೂ ಅರಿಯದ—ಅಪರಿಚಿತ—ಪಟ್ಟಣಕ್ಕೆ ಬಂದ ಕೆಲವೊಂದು ದಿನ ಪೇಟೆಯಲ್ಲಿ ಮೊಟ್ಟೆಗಾರಿಕೆ ಮಾಡಿ ಹೊಟ್ಟೆತುಂಬಿಕೊಳ್ಳುತ್ತಲಿದ್ದ. ಆಮೇಲೆ ಏನೋ ಒಂದು ಯೋಗ ಒದಗಿಬಂದು, ಶ್ರೀ ಅಂಗಡಿ ವಕೀಲರ ಮನೆಯಲ್ಲಿ ದನಗಾಹಿಯಾಗಿ ಕೆಲಸಕ್ಕೆ ನಿಂತುಕೊಂಡ.

ವಕೀಲರಲ್ಲಿ ಹಳ್ಳಿಯ ಫೌಜುದಾರೀ ಮೊಕದ್ದಮೆಗಳು ಎಷ್ಟೋ ಬರು-ವುವು. ಹಳ್ಳಿಯಿಂದ ಬಂದ ಸಾಕ್ಷೀದಾರರಿಗೆ ವಕೀಲರು ಸುಳ್ಳು ಹೇಳಲಿಕ್ಕೆ ಕಲಿಸುವುದನ್ನು ಗಂಗಣ್ಣ ನಿತ್ಯವೂ ನೋಡುತ್ತಾನೆ; ಈ ಸುಳ್ಳು ಸಾಕ್ಷಿಗಳಿಂದಲೇ ಅಪರಾಧಿ ನಿರಪರಾಧಿಯೆಂದೂ, ನಿರಪರಾಧಿ ಅಪರಾಧಿಯೆಂದೂ ಸಿದ್ಧವಾಗು-ವುದನ್ನು ಆಗಾಗ ಕಾಣುತ್ತಾನೆ. ಈ ಕಳ್ಳ-ಸುಳ್ಳರ ಗುರು ವಕೀಲರು, ಉಪ್ಪರಿಗೆಯ ಮೇಲೆ ಉಪ್ಪರಿಗೆ ಕಟ್ಟಿಸುವುದನ್ನು ನಿಟ್ಟಿಸುತ್ತಾನೆ. ತನಗೆ ಸತ್ಯದ ಪಾಠ ಕಲಿಸಿದ ಮುದುಕಿ ಸಾಮಾನ್ಯರಂತೆ ಸತ್ತುಹೋದುದನ್ನೂ, ಸತ್ಯದ ಪಾಠ ಕಲಿತ ತಾನು ಎಲ್ಲವನ್ನೂ ಕಳೆದುಕೊಂಡು, ದೆಸೆಗೇಡಿಯಾಗಿ ಎಲ್ಲಿಯೋ ಬಂದು ನಿಂತುಕೊಂಡುದನ್ನೂ ನೆನೆದು ನೆನೆದು ನಿಟ್ಟುಸಿರು ಹಾಕು ತ್ತಾನೆ. ದೇವಕ್ಕನ ನೆನಪಂತೂ ಗಂಗಣ್ಣನ ಹೃದಯ–ಮನಗಳನ್ನು ನಿತ್ಯವೂ ಕೆಣಕಿ ಕೆಣಕಿ ಕಾಡುತ್ತಲಿದ್ದಿತು. ಎಷ್ಟೋ ಇರುಳುಗಳನ್ನವನು ಕಣ್ಣಿಗೆ ಕಣ್ಣು ಹಚ್ಚದೆ ಕಳೆಯುವ.

ಅದರಂತೆಯೇ ವಕೀಲರ ಈ ಸುಳ್ಳಿನ ಶಿಕ್ಷಣ, ಅನ್ಯಾಯಗಳಿಗೆ ಆಶ್ರಯ ಕೊಟ್ಟು ಹಲವು ಪುಣ್ಯವಂತರ ಮನೆಗಳನ್ನು ಹಾಳುಗೊಳಿಸುತ್ತಿರುವುದು— ಇವೂ ಗಂಗಣ್ಣನ ಮನಸ್ಸು ಕೆಣಕಿ ಕೆರಳಿಸುವುವು. ಆಗ ಅವನು ತನ್ನನ್ನು ತಾನೇ ಮೆಚ್ಚಿಕೊಂಡು ನುಡಿಯುವನು :

“ ನಾನು ಸತ್ಯಮಾರ್ಗ ಹಿಡಿದದ್ದು, ಕೆಡಿಸಿದ್ದರ ನನ್ನೊಬ್ಬನ ಬಾಳೇ ಕೆಡಿಸಿದ್ದೀತು. ಈ ಜನರ ಸುಳ್ಳಿನ ಮಾರ್ಗ ಲೋಕಾನೆಲ್ಲಾ ಕೆಡಸತಾ ಹೊಂಟೈತಿ ಅಲ್ಲಾ ! ”

ಏನಾದರೇನು ? ಗಂಗಪ್ಪ ದನಗಾಹಿ; ಲೋಕದಲ್ಲಿ ಅವನ ಅಸ್ತಿತ್ವಕ್ಕೆ ಬೆಲೆಯೇ ಇಲ್ಲ. ಶ್ರೀ ಅಂಗಡಿಯವರು ದೊಡ್ಡ ವಕೀಲರು. ಸಮಾಜದಲ್ಲಿ ಸಭ್ಯಗೃಹಸ್ಥರೆಂಬ ಹೆಸರಿನಿಂದ ಶೋಭಿಸುವವರು !

